ತ್ರಿವಿಧ ದಾಸೋಹ ಮೂರ್ತಿಗಳಾದ ಪರಮಪೂಜ್ಯ

**ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ**

## ವಜ್ರಮಹೋತ್ಸವ ಪ್ರತಿಷ್ಠಾನ

**ಶ್ರೀ ಸಿದ್ಧಗಂಗಾ ಮಠ, ತುಮಕೂರು-572 104.**

* ಶ್ರೀ ಸಿದ್ಧಗಂಗೆ ವಿದ್ಯಾರ್ಥಿಗಳಿಗೆ ಶಾಂತವಾದ ವಿದ್ಯಾಸಾಗರ.
* ಶ್ರೀ ಶ್ರೀಗಳವರ ನಿರಂತರ ಶ್ರಮದಿಂದ 5 ಸಹಸ್ರ ಎಲ್ಲಾ ಕೋಮಿನ ವಿದ್ಯಾರ್ಥಿಗಳು ಆಶ್ರಯ ಪಡೆದಿದ್ದಾರೆ.
* ಪ್ರಸ್ತುತ ವಿದ್ಯಾರ್ಥಿಗಳ ಕೊರತೆಯನ್ನು ನಿವಾರಿಸುವ ಯೋಜನೆ.
* ಸುಸಜ್ಜಿತವಾದ ಭವ್ಯ ದಿವ್ಯ ವಿದ್ಯಾರ್ಥಿನಿಲಯ ಮತ್ತು ಪ್ರಸಾದ ನಿಲಯಗಳು ನಿರ್ಮಾಣವಾಗುತ್ತಿವೆ.
* ಇವು 6 ಕೋಟಿರೂಗಳ ಯೋಜನೆ. ಭವನಗಳು ಮುಕ್ತಾಯ ಹಂತದಲ್ಲಿವೆ.
* ನಾಡಿನ ಜನತೆ ಮತ್ತು ಶ್ರೀ ಮಠದ ಹಳೆಯ ವಿದ್ಯಾರ್ಥಿಗಳು ಯೋಜನೆಗೆ ನೆರವಾಗುತ್ತಿದ್ದಾರೆ.

**ವಜ್ರಮಹೋತ್ಸವ ಸಮಾರಂಭ 1997 ಜನವರಿ/ಮಾರ್ಚಿಯಲ್ಲಿ ನಡೆಯುವ ಸಂಭವವಿದೆ.**

* ಪೂರ್ಣವಾಗಿ ಈ ವಜ್ರಮಹೋತ್ಸವ ಸ್ಮಾರಕಗಳ ರಚನಾಕಾರ್ಯ ಮುಗಿಯಲು ಇನ್ನೂ 1 ಕೋಟಿ ರೂಗಳು ಬೇಕಾಗುತ್ತದೆ.
* ಶ್ರೀ ಶ್ರೀಗಳವರ ಮಹಾತ್ಯಾಗದ ಸಂದೇಶವನ್ನು ಸಾರುವ ಈ ಮಹೋನ್ನತ ಸ್ಮಾರಕಗಳಿಗೆ ಎಲ್ಲರೂ ಉದಾರವಾಗಿ ನೆರವು-ಸಹಕಾರ ನೀಡಬೇಕಾಗಿ ಕೋರುತ್ತೇವೆ.

ಡಾ. ಎಂ. ಸಿ. ಮೋದಿ
ಅಧ್ಯಕ್ಷರು.

ಬಿ.ಎಸ್. ಮುದ್ದಪ್ಪ, ಐ.ಎ.ಎಸ್.(ನಿ), ಎಸ್.ಎಸ್. ಹಸಬಿ,ಐ.ಪಿ.ಎಸ್(ನಿ.)
ಕಾರ್ಯಾಧ್ಯಕ್ಷರು. ಕಾರ್ಯದರ್ಶಿಗಳು.

# ಸಿದ್ಧಗಂಗಾ

ಸಂಪುಟ 32 ಸಂಚಿಕೆ-11 ನವಂಬರ್-1996.

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಸೇವಾ ಸೂರ್ಯನಾದೆ ದೀನಾನಾಥರ ಪೊರೆದೆ
ದೇವಮಾನವನಾಗಿ ಬೆಳಗಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥



ಹೂವಿನಲಿ ಮುಳ್ಳನ್ನು ಬೆಣ್ಣೆಯಲಿ ಕಲ್ಲನ್ನು
ಕಾಂಬುವುದೆ ಜಗದ ಒರಿಡೊಂಕು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥



ತೊಂಬತ್ತರ ಅಂಚಿನಲಿ ನಿಂದು ನಗುತಿಹ ಬೆಳಕೆ
ಮುಂಬರಿದ ಸೇವಾ ಸಂಪಿಗೆಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

❁ ಹೆಚ್. ವಿ. ವೀರಭದ್ರಯ್ಯ



| ಲೇಖನ | ಲೇಖಕರು | ಪುಟ |
|---|---|---|
| * ಶ್ರೀವಾಣಿ | — | 5 |
| * ಶ್ರೀ ಸಿದ್ಧಲಿಂಗೇಶ್ವರ ವಚನ | — | 7 |
| * ಸಂಪಾದಕೀಯ | — | 9 |
| * ಬೆಳಕಿನ ಹಬ್ಬ ದೀಪಾವಳಿ | — ಆರ್ ಜಿ. ಶ್ಯಾನಭಾಗ | 11 |
| * ಜ್ಞಾನಾರ್ಜನೆ | — ಕೆ. ಎನ್. ರಾಜಶೇಖರಯ್ಯ | 15 |
| * ಸಂಸ್ಕೃತಿಗೆ ಮೊರೆ | — ಪ. ರಾಮಕೃಷ್ಣ ಶಾಸ್ತ್ರಿ | 21 |
| * ತನ್ನುದ್ಧಾರಕ್ಕೆ ತಾನೆ ಹೊಣೆ | — ಎಂ. ಮಾಧವಪೈ | 23 |
| * ತಲೆತಗ್ಗಿಸ ಬೇಡಿ | — ಬಿ. ಸುಬ್ರಾಯ ಅಡಿಗ | 26 |
| * ಮನುಷ್ಯ ಚಾರಿತ್ರ್ಯ ಹೀನನಾಗುವುದು ಹೇಗೆ ? | — ಭಾವಜ್ಞ ಜಮುಖಂಡಿ | 28 |
| * ಬಹೂಪಯೋಗಿಯಾದ ಕಹಿ-ಬೇವು | — ಡಾ|| ಎಲ್. ಆರ್. ಹೆಗಡೆ | 31 |
| * ವಚನ ಸಾಹಿತ್ಯದ ಉಗಮ | — ಎಸ್. ಎಂ. ಸಜ್ಜನ್ | 37 |
| * ಕ್ಷೇತ್ರವಾರ್ತೆ | — ಹೆಚ್. ಬಿ. ಗಂಗಾಧರಯ್ಯ | 45 |

## ಶ್ರೀವಾಣಿ



**ಪರದೆ** ಮುಚ್ಚಲು, ತೆರೆಯಲು ಬಳಸುವ ಬಟ್ಟೆಯೇ ಪರದೆ. ವ್ಯಕ್ತಿ ವ್ಯಕ್ತಿಗಳ ಮಧ್ಯೆ ಪರದೆ. ಜಾತಿ ಜಾತಿಗಳ ಮಧ್ಯೆ ಪರದೆ. ಪಕ್ಷ ಪಕ್ಷಗಳ ಮಧ್ಯೆ ಪರದೆ. ವರ್ಣ, ವರ್ಗ, ಲಿಂಗ, ವಯಗಳ ಮಧ್ಯೆ ಪರದೆ. ಅಷ್ಟೇಕೆ ದೇಶದೇಶಗಳ ಮಧ್ಯೆ ಪರದೆ. ಪರದೆ ಇಂದು ಪರಿಧಿಯತೀತವೆನಿಸಿದೆ. ಪರದೆಯಿಂದಾಗಿ ಕಾಮ,ಕ್ರೋಧ ಮೋಹ, ಲೋಭ, ಮದ, ಮತ್ಸರಗಳು ನರ್ತನ ನಡೆಸುತ್ತ ಬಂದಿವೆ. ಪರದೆ ಸಂದೇಹ ಸಂಶಯಗಳಿಗೆ ಬೀಜಾಂಕುರವಾಡುವುದಲ್ಲ. ಪರದೆ ತೆಗೆದಾಗ ನಿಚ್ಚಳ ಬೆಳಕನ್ನೂ ತೋರಿಸುವ ವಿಶೇಷವಾಗಿದೆ. ತನಗೂ ಲೋಕಕ್ಕೂ ಇರುವ ಪರದೆ ತುಂಬ ಸೂಕ್ಷ್ಮವಾಗಿದೆ. ಅಜ್ಞಾನವಾಗಿ, ಮಾಯೆಯಾಗಿ, ಆಸೆಯಾಗಿ ಪರದೆ ಪ್ರಲೋಭಿಸುತ್ತಿದೆ. ಕೋಟಿ ಕೋಟಿ ರೂಪಾಯಿಗಳನ್ನು ಸಂಗ್ರಹಿಸಿದ್ದರೂ ಇನ್ನೂ ಸಂಪಾದಿಸಬೇಕೆಂಬ ಆಸೆ ಕುಡಿವರಿಯುತ್ತಿದೆ. ಮಾನವೀಯತೆಯನ್ನು ಮುಕ್ಕುತ್ತಿದೆ. ಧರ್ಮ ಪ್ರಜ್ಞೆ ಕಣ್ಮುಚ್ಚುತ್ತಿದೆ. ರಾಷ್ಟ್ರ ನಾಯಕರ ಜೀವನ ವಿಧಾನವನ್ನು ನೋಡಿದರೆ ವ್ಯಥೆಯಾಗುತ್ತದೆ. ಅದೆಷ್ಟು ಐಶ್ವರ್ಯ ಸಂಗ್ರಹಣೆ ! ಅದೆಂಥ ಭೋಗವಿಲಾಸ ! ಜನಕಲ್ಯಾಣದ ಪ್ರತಿಜ್ಞೆಗೆ ಮಾಡುತ್ತಿರುವ ಘನ ಘೋರ ಅನ್ಯಾಯ ! ಹೆಣ್ಣು, ಹೊನ್ನು, ಮಣ್ಣುಗಳ ಮಾಯೆಯಲ್ಲಿ ಮಾನವ್ಯವನ್ನೇ ಹರಾಜು ಮಾಡುತ್ತಿರುವ ಮುಖಂಡರ ಮುಂದೆ ಅದೆಂತಹ ಪರದೆ. ಆಳುವ ನೆಪದಲ್ಲಿ ಅಳುವಂತೆ ಮಾಡುವುದೆ? ತಾನೂ ಹಾಳಾಗುವುದರ ಜತೆಯಲ್ಲಿ ದೇಶ ತಲೆ ತಗ್ಗಿಸುವಂತೆ ಮಾಡುವುದೆ ? ಆಸೆಗೊಂದು ಮಿತಿಬೇಡವೆ ? ಅಜ್ಞಾನಕ್ಕೊಂದು ಎಲ್ಲೆಯಿಲ್ಲವೆ? ಪರಂಪರೆಯ ಪ್ರಜ್ಞೆ ಬೇಡವೆ ? ಹಣ, ಅಧಿಕಾರ, ಭೋಗ ಜೀವನವೇ ಪರಮಗಂತವ್ಯವೆ? ಧಾರ್ಮಿಕ ದೃಷ್ಟಿ ಇಲ್ಲದ ಯಾವ ಜೀವನವೂ ಚಿರಂತನವಲ್ಲ. ಇಹ-ಪರಗಳ ಮಧ್ಯೆಯಿರುವ ಪರದೆಯನ್ನು ಸರಿಸಿನೋಡುವ ಸೂಕ್ಷ್ಮ ಮಾನವೀಯತೆಯೊಂದೇ ಲೋಕ ತಾರಕ.

[13-11-96 ರಂದು ಕಾಳೇನಹಳ್ಳಿ ಶರಣಮೇಳದಲ್ಲಿ ಮಾಡಿದ ಆಶೀರ್ವಚ]

## ಸಾರುತಿದೆ ಬಂಡೆ

ವೀರೇಶ, ವಿಜಯಪುರ, ದೇವನಹಳ್ಳಿ-ತಾ, ಬೆಂಗಳೂರು ಗ್ರಾ. ಜಿಲ್ಲೆ.

ಬೆಟ್ಟದ ಮೇಲೊಂದು ಸಾರುತಿದೆ ಬಂಡೆ ||
ಕಾಯಕವೆ ಕೈಲಾಸ ಎಂಬುದನು ಕಂಡೆ ||
ಅಟವೀಶ ಉದ್ದಾನ ಶಿವಯೋಗಿ ಮಹಿಮೆ ||
ಸಿದ್ಧಗಂಗಾ ಕ್ಷೇತ್ರ ಕಣ ಕಣದ ಹಿರಿಮೆ||

ಕೋಳಿ ಕೂಗದ ಮುನ್ನ ಶಿವಯೋಗದ ತಪವು
ಲೋಕ ಕಲ್ಯಾಣಕ್ಕೆ ಸಲ್ಲಿಸುವ ಜಪವು
ಭುವಿಜನರ ಪೊರೆಯಲು ಹರನೆ ಗುರುವಾಗಿ
ಬಂದಿಹನು ಕಾರಣಿಕ ಶಿವಕುಮಾರ ಶಿವಯೋಗಿ||

ಓಂಕಾರ ನಾದದ ಸುಪ್ರಭಾತದ ಗಾನ
ಗುರುಸಿದ್ಧಲಿಂಗೇಶ ತಾ[illegible]ನು [illegible]ನ
ರವಿಕಿರಣ ಮೇಲೇರಿ ಕತ್ತಲೆಯು ಹರಿವಂತೆ
ಶರಣಾಗಿ ಬಂದವರ ಮನಹರಿವುದು ಚಿಂತೆ ||

ಸದ್ದು ಗದ್ದಲವಿಲ್ಲ ತ್ರಿವಿಧ ದಾಸೋಹ
ಮಾಡಿದೆ ನೆಂಬುದಿದು ಮನದೊಳಿಲ್ಲದ ಮೋಹ
ಒಡಲ ಹಸಿವಿನ ಜೊತೆಗೆ ನೆತ್ತಿಗುಪದೇಶ
ಗುರುಕರುಣ ಮೂಡಿದರೆ ಕಳೆವುದು ಭವಪಾಶ||

ಕ್ಷೇತ್ರದಲಿ ಕಲಿಯುವ ಬಾಲಕರ ಕೂಟ
ಮುಂಜಾವು ಸಂಜೆಯ ಪ್ರಾರ್ಥನೆಯ ನೋಟ
ಕೈಲಾಸ ದೋಲಗವು ಧರೆಗಿಳಿದು ಬಂದಂತೆ
ಒಕ್ಕೊರಲ ಗೀತೆ ತಹುದೆಲ್ಲರಲಿ ಸಮತೆ ||

ರಜತ ಸ್ವರ್ಣೋತ್ಸವ ಮಾಸದಿದೆ ಮನದಲ್ಲಿ
ವಜ್ರವೈಭವ ನೋಟ ಕಾತುರತೆ ಕಣ್ಣಲ್ಲಿ
ಅಡೆತಡೆಗಳಿಲ್ಲದೆ ಮಹೋತ್ಸವ ನಡೆನಂತೆ
ಕರುಣಿಸಲಿ ವೀರೇಶ ಕರುನಾಡ ಭಾಗ್ಯವಂತೆ.

## ಶ್ರೀ ಸಿದ್ಧಲಿಂಗೇಶ್ವರ ವಚನ



ಅಂಗ ಲಿಂಗ ಸಂಬಂಧದ ನಿಲುಕಡೆಯನರಿಯದೆ
ಅಘೋರತಪವ ಮಾಡಿದರೇನು ?
ಗಾಳಿಹಾರವ ಕೊಂಡರೇನು ?
ತರಗೆಲೆಯ ಮೆದ್ದರೇನು ?
ಗಿರಿಗಹ್ವರ ದೊಳಗಿದ್ದರೇನು ?
ಅಂಗ ಲಿಂಗ ಸಂಬಂಧಿಗಳಾಗ ಬಲ್ಲರೆ ?
ಅಂಗ ಲಿಂಗ ಸಂಬಂಧಂಎದಲ್ಲದೆ
ಅಂತರಂಗದಲ್ಲಿ ಅರುಹು ತಲೆದೋರದು;
ಅಂತರಂಗದಲ್ಲಿ ಅರುಹು ತಲೆದೋರಿದಲ್ಲದೆ
ಆತ್ಮಲಿಂಗದ ಆದ್ಯಂತವನರಿಯದೆ ಅಘೋರ ತಪವ ಮಾಡಿದರೆ
ಅದೇತಕ್ಕೂ ಪ್ರಯೋಜನವಿಲ್ಲ ಕಾಣಾ
ಮಹಾಲಿಂಗ ಗುರು ಶಿವ ಸಿದ್ದೇಶ್ವರ ಪ್ರಭುವೇ ?

ಲಿಂಗಾಂಗಳ ಸಂಬಂಧದ ರಹಸ್ಯವನ್ನು ಸರಿಯಾಗಿ ತಿಳಿಯದೆ ಎಂಥ ಕಠೋರ ತಪಸ್ಸನ್ನಾಚರಿಸಿದರೂ ಲಿಂಗಾಂಗ ಸಾಮರಸ್ಯವನ್ನು ಪಡೆಯಲು ಸಾಧ್ಯವಿಲ್ಲ. ಲಿಂಗಾಂಗ ಸಾಮರಸ್ಯ ಸುಖವನ್ನು ಅನುಭವಿಸ ಬೇಕೆಂಬುವವರು ತಮ್ಮ ಅಂತರಂಗದಲ್ಲಿ ಲಿಂಗದಲ್ಲಿ ನಿಜವನ್ನು ತಿಳಿಯಲೇ ಬೇಕು. ಅದಿಲ್ಲದೆ ಮಾಡುವ ತಪವ್ಯರ್ಥ.

(ಕೃಪೆ :- ಷಟ್‌ಸ್ಥಲ ಜ್ಞಾನಸಾರಾಮೃತ. ಶ್ರೀ ತೋಂ.ಸಿ ಕೈಂ.ಸೇ. ಸಂಘ. ಎಡೆಯೂರು–ಗದಗ)

## ಸಿದ್ಧಗಂಗಾ ಮಾಸ ಪತ್ರಿಕೆ

**ಸಂಪಾದಕ ಮಂಡಳಿ**

**ಚನ್ನಪ್ಪ ಎರೇಸೀಮೆ**
ಪ್ರಧಾನ ಸಂಪಾದಕರು.

**ಹೆಚ್. ವಿ. ವೀರಭದ್ರಯ್ಯ**
ಸಂಪಾದಕರು

**ಎಂ. ರೇಣುಕಾರಾಧ್ಯ**
ಸಹ ಸಂಪಾದಕರು

**ಹೆಚ್. ಬಿ. ಗಂಗಾಧರಯ್ಯ**
ಪ್ರಕಾಶಕರು

* * *

**ಸಲಹಾ ಸಮಿತಿ**

ಡಾ|| ಎಂ. ಎನ್. ಚನ್ನಬಸಪ್ಪ
ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯ
ಗೊ. ರು. ಚನ್ನಬಸಪ್ಪ
ಎಚ್. ಎಸ್. ನರಸಿಂಹಜೀಯರ್
ಟಿ. ಆರ್. ಮಹದೇವಯ್ಯ
ಬಿ. ವೀರಭದ್ರಯ್ಯ
ಪಿ. ಎನ್. ಚಂದ್ರಶೇಖರಯ್ಯ

* * *

**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**
ಮುದ್ರಕರು

* * *

**ಶ್ರೀಸಿದ್ಧಗಂಗಾಕ್ಷೇತ್ರ**
ಪ್ರಕಟಣೆಯಸ್ಥಳ

### ಲೇಖಕರಲ್ಲಿ ಮನವಿ

"ಸಿದ್ಧಗಂಗಾ" ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ, ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 32ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ಪರತೆಯಿಂದ ಮುನ್ನಡೆಯುತ್ತಿರುವ ಪತ್ರಿಕೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

"ಸಂಪಾದಕರು"
**'ಸಿದ್ಧಗಂಗಾ' ಮಾಸ ಪತ್ರಿಕೆ**
ಶ್ರೀ ಸಿದ್ಧಗಂಗಾಮಠ
ತುಮಕೂರು ಜಿಲ್ಲೆ–572104.

ವಾರ್ಷಿಕ ಚಂದಾ 35-00 ರೂ
ಆಜೀವ ಸದಸ್ಯತ್ವ 500-00

## ಸಂಪಾದಕೀಯ

1956 ರ ನವಂಬರ್ ಕನ್ನಡನಾಡಿನ ಪುಣ್ಯದ ಪೂರ್ವದಿಗಂತದಿನವ ಅರುಣೋದಯ ವಾಯಿತು. ನೆಲ, ಜಲ ಹಿಗ್ಗನ್ನು ಅನುಭವಿಸಿತು. ಕನ್ನಡಿಗರ ಮನೆ, ಮನೆಗಳಲ್ಲಿ ಬೆಳಕಿನ ದೀಪಾವಳಿ ಅರಳಿತು. ಏಕೀಕರಣಕ್ಕಾಗಿ ದುಡಿದವರ ಶ್ರಮ ಸಾರ್ಥಕವಾಯಿತು. ಭಾಷಾವಾರು ಪ್ರಾಂತ್ಯಗಳ ರಚನೆ ಅನುಗುಣವಾಗಿ ರಾಜ್ಯ ವಿಶಾಲವಾಯಿತು. ಮೊದಲಿಗೆ ವಿಶಾಲ ಮೈಸೂರೆಂದಾಗಿ ಕೆಲವು ವರ್ಷಗಳ ನಂತರ ಕರ್ನಾಟಕ ವೆಂದಾಯಿತು. ಅಂದಿನಿಂದ ಪ್ರತಿ ವರ್ಷವೂ ನವಂಬರ್ ತಿಂಗಳಿನಲ್ಲಿ ರಾಜ್ಯೋತ್ಸವವನ್ನು ಆಚರಿಸಿಕೊಂಡು ಬರಲಾಗುತ್ತಿದೆ. ನಲವತ್ತೊಂದನೆ ರಾಜ್ಯೋತ್ಸವ ಇದೀಗ ರಾಜ್ಯದ ಮೂಲೆ ಮೂಲೆಗಳಲ್ಲಿ ಆಚರಿಸಲಾಗುತ್ತಿದೆ. ಸಂಘ ಸಂಸ್ಥೆಗಳು, ಶಾಲಾ ಕಾಲೆಜುಗಳಲ್ಲಿ ರಾಜ್ಯೋತ್ಸವದ ಆಚರಣೆ. ಹಲವು ಹನ್ನೊಂದು ರೀತಿಯಲ್ಲಿ ನಡೆಯುತ್ತಿದೆ. ಸಾಹಿತಿಗಳಿಗೆ, ಕಲಾವಿದರಿಗೆ, ಪ್ರತಿಭಾವಂತರಿಗೆ ಮಾನ ಸನ್ಮಾನಗಳು ನಡೆಯುತ್ತಿದೆ. ಈ ವರ್ಷ ವಿಶೇಷವೆಂದೇ ಪರಿಗಣಿಸಬೇಕಾಗಿದೆ. ಕನ್ನಡದವರೇ ಆದವರೊಬ್ಬರು ರಾಷ್ಟ್ರದ ಪ್ರಧಾನಿಯಾಗಿರುವುದು ಒಂದು ವಿಶೇಷವಾದರೆ, ಚಲನಚಿತ್ರ ಜಗತ್ತಿನ ಮೇರು ನಟ ಡಾ. ರಾಜಕುಮಾರ್ ದಾದಾ ಸಾಹೇಬ್ ಫಾಲ್ಕೆ ಪ್ರಶಸ್ತಿಗಳಿಸಿ ಕರ್ನಾಟಕದ ಸಾಂಸ್ಕೃತಿಕ ಹಿರಿಮೆಗೆ ಕೋಡು ಮುಡಿಸಿದ್ದಾರೆ. ಜ್ಞಾನಪೀಠ ಪ್ರಶಸ್ತಿ ವಿಜೇತರಾದ ಆರುಮಂದಿ ಹಿರಿಯರು ಕನ್ನಡ ಸಾಹಿತ್ಯಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. ರಾಷ್ಟ್ರದ ರಾಜಧಾನಿ ದೆಹಲಿಯಲ್ಲೀಗ ಕನ್ನಡದ ಕಂಪು ಹರಡುತ್ತಿದೆ. ಹೊರನಾಡ ಕನ್ನಡಿಗರಂತೂ ತಮ್ಮ ಭಾಷೆಯನ್ನು ಎದೆಗಪ್ಪಿ ನಡೆದಿದ್ದಾರೆ. ಆದರೆ ಕರ್ನಾಟಕದ ರಾಜಧಾನಿ ಬೆಂಗಳೂರು ಮಾತ್ರ ಕನ್ನಡಿಗರ ಕೈ ಬಿಟ್ಟು ಹೋಗುವಂತಿದೆ. ಅಭಿಮಾನ ಶೂನ್ಯರಾದ ಕನ್ನಡಿಗರನ್ನೂ ಎಚ್ಚರಿಸುವ ಪ್ರಯತ್ನಗಳು "ಕನ್ನಡ ಶಕ್ತಿಕೇಂದ"ದಿಂದ ಹಾಗೂ ಕನ್ನಡಾಭಿಮಾನಿ ಸಂಘ, ಸಂಸ್ಥೆಗಳಿಂದ ನಿರಂತರವಾಗಿ ನಡೆಯುತ್ತಲೇ ಇವೆಯಾದರೂ ಕುಂಭಕರ್ಣ ಕನ್ನಡಿಗರನ್ನು ಮೇಲೇಳಿಸಲು ಮತ್ತೊಮ್ಮೆ ಅಗಾಧ ಹುಟ್ಟಿಬರಬೇಕೋ ತಿಳಿಯದು. ಕನ್ನಡಿಗರು ಕನ್ನಡವನ್ನು ಉಳಿಸಿಕೊಳ್ಳದೇ ಹೋದರೆ ಮತ್ತಾರು ಬರುತ್ತಾರೆ ಕನ್ನಡದ ಉದ್ಧಾರಕ್ಕೆ ?

ಮಕ್ಕಳು ಬಾಳ ನಂದನದ ಹೂವುಗಳು. ಬೇರು 'ಹೂವು; ನೀವು' ಎಂದರು ಕವಿವರ್ಯ ಬೇಂದ್ರೆ ಮಕ್ಕಳ ದಿನಾಚಾರಣೆಯನ್ನಾಗಿ ಆಚರಿಸಿದವರು ತಮ್ಮ ಹುಟ್ಟುಹಬ್ಬವನ್ನು ರಾಷ್ಟ್ರದಪ್ರಧಾನಿಯಾಗಿದ್ದ ಪಂಡಿತ ಜವಹರಲಾಲ್ ನೆಹರು. ಮಕ್ಕಳನ್ನು ಪ್ರೀತಿಸು ಅವು ಸತ್ಯದ ಪ್ರತಿನಿಧಿಗಳೆಂದು ರವೀಂದ್ರನಾಥಠಾಗೂರ್. ಮಕ್ಕಳ ನಗುವಿನಲ್ಲಿ ದೇವರಿರುತ್ತಾನೆ ಎನ್ನುತ್ತಾರೆ ಪೂಜ್ಯ ಡಾ. ಶ್ರೀ ಶಿವಕುಮಾರಸ್ವಾಮಿಗಳು. ಮಕ್ಕಳೆಂದರೆ ಮನೆಯ ನಂದಾದೀಪಗಳೆಂದು ಹಿರಿಯರು ಪ್ರೀತಿಸುತ್ತಿದ್ದರು. ಮಕ್ಕಳನ್ನು ಕುರಿತು ಸಾಹಿತ್ಯ ರಾಶಿ ರಾಶಿಯಾಗಿದೆ. "ಕಂದನ ಕೊಡುಶಿವನೆ ಬಂಧನ ಪಡಲಾರೆ" ಎಂದಳು ಜನಪದಗರತಿ. ಪಡೆದ ಮಗುವನ್ನು "ಆಚಾರಕ್ಕರಸಾಗು ನೀತಿಗೆ ಪ್ರಭುವಾಗು ಮಾತಿನಲಿ ಚೂಡಾಮಣಿಯಾಗು ನನ್ನಕಂದ ಜ್ಯೋತಿಯೇ ಆಗು ಜಗಕ್ಕೆಲ್ಲ" ಎಂದು ಹರಸಿದಳು. ಮಕ್ಕಳು ಪ್ರೀತಿಯಿಂದ ಬೆಳೆದಾಗ, ಸುಸಂಸ್ಕೃತರಾಗುತ್ತಾರೆ. ಆಧುನಿಕ ಜೀವನದ ಜಂಜಾಟದಲ್ಲಿ ತಂದೆ ತಾಯಿಗಳ ಪ್ರೀತಿಯಿಂದ ವಂಚಿತವಾಗಿ ಬೆಳೆಯುತ್ತಿರುವ ಅದೆಷ್ಟೋ ಮಕ್ಕಳಿಂದು ಸಮಾಜಕಂಟಕರಾಗಿ ಕುಟುಂಬದ ಸಮಸ್ಯೆಯಾಗಿ ತಂದೆ ತಾಯಿಗಳ ಮನೋರೋಗಕ್ಕೆ ಕಾರಣರಾಗುವಂತಹ ಪರಿಸರ ನಿರ್ಮಾಣವಾಗುತ್ತಿರುವುದು ದುರ್ದೈವ. ತಂದೆ-ತಾಯಿಗಳು ಉದ್ಯೋಗಿಗಳು ಮಗು ಆಯಾಳ ಕಣ್ಣೆಚ್ಚರಿಕೆಯಲ್ಲಿ ಶಿಶು ಸಂರಕ್ಷಣಾಕೇಂದ್ರಗಳಲ್ಲಿ ಯಾಂತ್ರಿಕ ಪ್ರೀತಿಯ ಕೃತಕ ವಿಧಾನದಲ್ಲಿ ಬೆಳೆಯುತ್ತಿರುವುದನ್ನು ಮಕ್ಕಳ ತಜ್ಞರು ಕಂಡು ನಿಟ್ಟುಸಿರು ಬಿಡುವಂತಾಗಿರುವುದು ಕಟು ಸತ್ಯ. ಒಂದು ದಿನ ಶಾಲೆಯಲ್ಲಿ ಮಕ್ಕಳಿಗೆ ಚಾಕಲೇಟುಕೊಟ್ಟು ಮಕ್ಕಳ ದಿನಾಚರಣೆಯನ್ನು ಆಚರಿಸಿದಾಕ್ಷಣಕ್ಕೆ ಮಕ್ಕಳ ಕಲ್ಯಾಣವಾದೀತೆ ? ಮಕ್ಕಳ ಅಭಿವೃದ್ಧಿಯಲ್ಲಿ ಆಸಕ್ತಿಯಿರುವವರೆಲ ಯೋಚಿಸಬೇಕು.



# ಬೆಳಕಿನ ಹಬ್ಬ ದೀಪಾವಳಿ

ಆರ್.ಜಿ. ಶ್ಯಾನಭಾಗ, ಅಧ್ಯಾಪಕರು, ಶರಾವತಿ ಹೈಸ್ಕೂಲ್, ಹೊಸಾಡ, ಹೊನ್ನಾವರ, (ಉ.ಕ.)

ಹಬ್ಬ ಹರಿದಿನಗಳ ಆಚರಣೆ ಇಹದ ಬದುಕಿಗೆ ಪರದ ಚಿಂತನೆಗೂ ಸಾಧನೋಪಾಯಗಳು. ಜನ್ಮಗತ ದೇವಋಣ, ಪಿತೃ ಋಣ ಹಾಗೂ ಋಷಿಋಣಗಳಿಂದ ವಿಮೋಚನೆಯನ್ನು ಪಡೆಯಲು ಅವುಗಳ ಆಚರಣೆಯು ಮಾನವನಿಗೆ ಅನಿವಾರ್ಯವಾದದ್ದು. ಹಬ್ಬ ಹರಿದಿನಗಳಲ್ಲೂ ವ್ರತನಿಯಮ ತಳಿರು ತೋರಣಗಳಿಂದ ಅಲಂಕೃತ ಮನೆಯು ದೇಗುಲವಾಗಿ ಸೃಷ್ಟಿತವಾಗುತ್ತದೆ. ಅವುಗಳ ಆಚರಣೆಯು ಮೂಲವನ್ನು ಅರಿಯಲು ಕಷ್ಟಸಾಧ್ಯವಾದರೂ ಅಸುರರ ದಮನ ಹಾಗೂ ದೈವೀ ವಿಕಾಸದ ಬಗ್ಗೆ ವಿಶಿಷ್ಟ ಅರಿವನ್ನು ಮೂಡಿಸಲು ಅವು ರೂಢಿಕೃತವಾಗಿ ಬಂದಿದೆ. ಪ್ರಾಪಂಚಿಕ ಕ್ಲೇಷ ಹಾಗೂ ಕಷ್ಟ ಕಾರ್ಪಣ್ಯಗಳನ್ನು ಒಂದು ದಿನವಾದರೂ ದೂರೀಕರಿಸಿ ದೇವಸಾನಿಧ್ಯವನ್ನು ಪಡೆಯುವ ಅಂತಹ ಹಬ್ಬ ಹರಿದಿನಗಳಲ್ಲಿ ದೀಪಾವಳಿ ಪರ್ವಕಾಲ ಒಂದು.

ಮನೆ ಮನೆಯಲ್ಲಿ ದೀಪವ ಬೆಳಗಿಸಿ ಜನಮನದ ತಿಮಿರಾಂಧಕಾರವನ್ನು ತೊಲಗಿಸುವದು ದೀಪಾವಳಿಯ ಮಹದುದ್ದೇಶ. ದೀಪಾವಳಿಯ ಶಾಬ್ಧಿಕ ಅರ್ಥವೇ ಬೆಳಕಿನ ಹಬ್ಬ. ಉತ್ತರ ಭಾರತದಲ್ಲಿ ಈ ಹಬ್ಬವನ್ನು ದೀಪಾವಳಿ ಎಂದು ಕರೆಯುವರು ಬಂಗಾಳದಲ್ಲಿ ಕಾಳೀ ಹಬ್ಬವನ್ನು ಆಚರಿಸಿ ಲಕ್ಷ್ಮೀಯ ರೂಪದಲ್ಲಿ ಶ್ರೀ ದೇವಿಯನ್ನು ಅಂದು ಪೂಜಿಸಲಾಗುತ್ತದೆ.

ವರ್ಣ ರಂಜಿತ ದೀಪಾಲಂಕಾರ, ನೂತನ ಉಡುಗೆ ತೊಡುಗೆ, ದೇವತಾರ್ಚನೆ ಘಟಾಕೀ, ಬಾಣ ಬಿರುಸುಗಳ ಹಾರಾಟ ನೂತನ ಅಳಿಯಂದಿರಿಗೆ, ಮಾವಂದಿರಿಗೆ ಸ್ವಾಗತ ಹಾಗೂ ಅಭ್ಯಂಜನ ಸಾಂಪ್ರದಾಯಿಕ ಸಡಗರ ಸಂಭ್ರಮದಿಂದ ಆಚರಿಸುವ ದೀಪಾವಳಿಯ ಹಬ್ಬದ ವೈಶಿಷ್ಟಗಳಾಗಿವೆ.

ಮುಂಗಾರು ಬೆಳೆ ಕೊಯ್ಲಿಗೆ ಬರುವ ಕಾಲದೊಡನೆ ಈ ಹಬ್ಬದ ಆಗಮನವು ಆಗುತ್ತದೆ. ಅಶ್ವಯುಜ ಮಾಸದ ಕೊನೆಯ ಎರಡು ದಿನ ಹಾಗೂ ಕಾರ್ತಿಕ ಮಾಸದ ಆರಂಭ ದಿನದಂದು ಈ ಪರ್ವ ಕಾಲವನ್ನು ಆಚರಿಸಿದಲ್ಲಿ ದೇವಾಲಯ, ಗುರು ಮನೆ ಹಾಗೂ ಅರಮನೆಗಳಲ್ಲಿ ಮಾಸ ಪರ್ಯಂತ ಈ ಹಬ್ಬವು ದೀಪೋತ್ಸವದಿಂದ ವಿಜೃಂಭಿಸುತ್ತದೆ.

ಇತಿಹಾಸ ಪುರಾಣಗಳ ಪುಟಗಳನ್ನು ತಿರುವಿದಾಗ ಅವಿಸ್ಮರಣೀಯ ಘಟನೆಗಳು ದೀಪಾವಳಿಯಂದು ನಡೆದದ್ದು ಉಲ್ಲೇಖನಾರ್ಹ. ದೀಪಾವಳಿಯಂದು ಜಹಾಂಗೀರನು

ಗುರು ಗೋವಿಂದ ಸಿಂಗನನ್ನು ಕಾರಾಗೃಹದಿಂದ ಬಿಡುಗಡೆ ಮಾಡಿದ ದಿನ. ಅಂದು ಸಿಖ ಬಾಂಧವರು ಅಮೃತ ಸರದ ಸವರ್ಣ ಮಂದಿರದಲ್ಲಿ ಭೇಟಿಯನ್ನು ನೀಡಿ ಅಲ್ಲಿಯ ಕೊಳದಲ್ಲಿ ಪವಿತ್ರ ಸ್ನಾನವನ್ನು ಮಾಡುವರು. ಜೈನ ಮತಾವಲಂಬಿಗಳಿಗೆ ಕಾರ್ತಿಕ ಮಾಸವು ಮಹಾವೀರ ಶಕೆಯ ಆರಂಭ ಮಾಸ. ಮಹಾವೀರನು ನಿರ್ವಾಣ ಹೊಂದಿದ ಕಾಲವೆಂದು ಆ ದಿನ ಅವರು ದೀಪೋತ್ಸವವನ್ನು ಜರುಗಿಸುತ್ತಾರೆ. ಮಹಾವೀರನ ಶಿಷ್ಯ ಗೌತಮ ಗಣಧರನಿಗೆ ಅಂದು ಸಂಜೆ ಜ್ಞಾನೋದಯವಾದ ದಿವ್ಯ ಸ್ಮರಣಾರ್ಥವಾಗಿ ಜ್ಞಾನ ಲಕ್ಷ್ಮೀಯ ಪೂಜೆಯನ್ನು ಜೈನರು ಆಚರಿಸುತ್ತಾರೆ. ದಕ್ಷಿಣ ಭಾರತದವರಿಗೆ ಯುಗಾದಿಯಂತೆ ಉತ್ತರ ಭಾರತದವರಿಗೆ ದೀಪಾಳಿಯು ಸರ್ವ ಶ್ರೇಷ್ಠವಾದದ್ದು ಕಾರಣ. ದೀಪಾವಳಿಯ ಬಲಿ ಪಾಡ್ಯದಂದು ಉತ್ತರದವರಿಗೆ ವಿಕ್ರಮಶಕೆಯ ಆರಂಭ ನೂತನ ವರ್ಷದ ಆರಂಭ.

ವಾಣಿಜ್ಯೋದ್ಯಮಿಗಳಿಗೆ ಹಳೆಯ ಲೆಕ್ಕವನ್ನು ಮುಗಿಸಿ ನೂತನ ಲೆಕ್ಕಕ್ಕೆ ಪದಾರ್ಪಣ ಮಾಡುವ ಹೊಸ ಆರ್ಥಿಕ ವರ್ಷದ ಪ್ರಥಮ ದಿನ. ಜೂಜಾಟ ಪ್ರೇಮಿಗಳಿಗೆ ಜೂಜಾಟವನ್ನು ಪ್ರಾರಂಭಿಸಲು ದೀಪಾವಳಿಯು ಪ್ರಶಸ್ತ್ಯ ದಿನವೆಂದು ನಂಬಿಕೆ.

**ನೀರು ತುಂಬುವ ಹಬ್ಬ** :- ನರಕ ಚತುರ್ದಶಿಯ ಹಿಂದಿನ ರಾತ್ರೆ ಚತುರ್ದಶಿಯ ದಿನ ಚಂದ್ರೋದಯ ಸಮಯದಲ್ಲಿ ಅಭ್ಯಂಜನ ಮಾಡಲು ಅನುಕೂಲವಾಗುವಂತೆ ಹೆಂಗಳೆಯರು ಬಚ್ಚಲು ಮನೆಯನ್ನು ಶುಚಿಗೊಳಿಸಿ ಅಲಂಕರಿಸಿ ಹಂಡೆಯಲ್ಲಿ ನೀರನ್ನು ತುಂಬುತ್ತಾರೆ. ಜಲಂಧರನ ಭಯದಿಂದ ಧೃತಿಗೆಟ್ಟ ಪರಶಿವನ ಮಾಲಿಂಗದ ಬಳ್ಳಿಯಲ್ಲಿ ಅವಿತುಕೊಳ್ಳುತ್ತಾನೆ. ಪಾರ್ವತಿಯು ಆ ಬಳ್ಳಿಯನ್ನು ಹಂಡೆಗೆ ಸುತ್ತಿ ಆ ದುಷ್ಟನ ಕೈಯಿಂದ ಪರಶಿವನನ್ನು ರಕ್ಷಿಸುತ್ತಾಳೆ ಎಂಬ ಐತಿಹ್ಯವಿದೆ. ಆದುದರಿಂದಲೇ ನೀರು ತುಂಬುವ ಹಬ್ಬದಂದು ಮಾಲಿಂಗ ಬಳ್ಳಿಯನ್ನು ನೀರ ಹಂಡೆಗೆ ಸುತ್ತುವ ವಾಡಿಕೆಯು ಪ್ರಚಲಿತ ಇರುವದು.

ಸೂರ್ಯೋದಯಕ್ಕೆ ಮುನ್ನ ಚಂದ್ರೋದಯ ಕಾಲದಲ್ಲಿ ಅಭ್ಯಂಜನ ಮಾಡಬೇಕೆಂಬ ವಿಧಿಯು ಇರುವದು. ಕಾವೇರಿ ಮಹಿಮೆಯಲ್ಲಿ "ತೈಲೇ ಲಕ್ಷ್ಮೀ ಜಲೇ ಗಂಗಾ" ಎಂಬ ಉಲ್ಲೇಖದನ್ವಯ ದೀಪಾವಳಿಯ ಪರ್ವ ಕಾಲದಂದು ಅಭ್ಯಂಜನವು ಪವಿತ್ರವಾದದ್ದು. ಲಕ್ಷ್ಮೀಯು ತೈಲರೂಪಿಯಾಗಿಯೂ ಗಂಗೆಯು ಜಲರೂಪಿಯಾಗಿಯೂ ಸ್ಥಾಯಿಯಾಗಿರುತ್ತಾಳೆ. ಆಯುರಾರೋಗ್ಯ ಅಭಿವೃದ್ಧಿ ಲಕ್ಷ್ಮೀಕೃಪಾ ಕಟಾಕ್ಷ ಹಾಗೂ ಗಂಗೆಯ ಕರುಣೆಯು ದೀಪಾವಳಿಯಂದು ಅಭ್ಯಂಜನದಿಂದ ಪ್ರಾಪ್ತವಾಗುತ್ತದೆ. ಅಂದು ನೂತನ ವಸ್ತ್ರಾಧಾರಣೆಯಿಂದ ಅಂತರಂಗ ಬಹಿರಂಗಗಳೆರಡೂ ಶುದ್ಧಿಗೊಳ್ಳುತ್ತವೆ.



**ನರಕ ಚತುರ್ದಶಿ** :- ಶ್ರೀ ಕೃಷ್ಣ ಪರಮಾತ್ಮನು ತ್ರಿಲೋಕಕ್ಕೆ ಕುಟಾರಪ್ರಾಯನಾದ ನರಕಾಸುರನನ್ನು ಸಂಹರಿಸಿದ ಸಂಸ್ಮರಣಾರ್ಥ ಆಚರಿಸುವ ಶುಭದಿನವಿದು. ವರಾಹ ರೂಪವೆತ್ತ ಶ್ರೀಮನ್ನನಾರಾಯಣನ ಬೆವರಿನ ತೊಟ್ಟಿನಿಂದ ಸೃಷ್ಟಿತ ನರಕಕ್ಕೆಳೆಯುವ ರಕ್ಕಸೀಯ ಪ್ರವೃತ್ತಿಯ ಈ ಅಸುರನು ಬ್ರಹ್ಮನ ಮಗಳಾದ ಚತುರ್ದಶಿ, ವರುಣನ ಪುತ್ರ ಹಾಗೂ ಸಿದ್ಧಅಪ್ಸರೆಯನ್ನು ಅಪಹರಿಸುತ್ತಾನೆ. ವಿಶ್ವಕಲ್ಯಾಣಕ್ಕಾಗಿ ಅವತರಿಸಿದ ಶ್ರೀಮನ್ನನಾರಾಯಣನು ಅಶ್ವಿಜ ಕೃಷ್ಣ ಚತುರ್ದಶಿಯಂದು ಕಗ್ಗತ್ತಲಿನಲ್ಲಿ ನರಕಾಸುರನನ್ನು ಸಂಹರಿಸುತ್ತಾನೆ.

ನರಕಾಸುರನ ತಾಯಿಯ ಅರಿಕೆಯ ಮೇರೆಗೆ ನರಕಾಸುರನನ್ನ ಪೂಜಿಸುವ ಹಾಗೂ ಶ್ರೀ ಕೃಷ್ಣನನ್ನ ಸ್ಮರಿಸುವ ರೀತಿಯಲ್ಲಿ ಶ್ರೀ ಕೃಷ್ಣನು ಈ ಹಬ್ಬವನ್ನು ಜನಾದರಣೀಯ ಗೊಳಿಸುತ್ತಾನೆ.

**ಬಲೀಂದ್ರನ ಪೂಜೆ**:- ಪ್ರಹ್ಲಾದನ ಮೊಮ್ಮಗ ಬಲಿಯು ದಾನಶೂರತ್ವದಿಂದ ಕೊಬ್ಬಿದಾಗ ಶ್ರೀಮನನ್ನಾರಾಯಣನು ವಾಮನರೂಪಿಯಾಗಿ ಬಂದು ಬಲಿಯನ್ನು ಸತ್ವ ಪರೀಕ್ಷೆಗೆ ಒಳಪಡಿಸುತ್ತಾನೆ. ತನಗೆ ಮೂರು ಹೆಜ್ಜೆ ಭೂಮಿಯನ್ನು ದಾನವನ್ನಾಗಿ, ನೀಡಲು ಬಲಿಯಲ್ಲಿ ಬೇಡುತ್ತಾನೆ. ಬಲಿಯು ದಾನವಾಗಿ ಎಂದಿರುವ ಭೂಮಿಯು ವಿಶ್ವರೂಪಿ ಶ್ರೀಮನನ್ನಾರಾಯಣನಿಗೆ ಭೂಮ್ಯಾಕಾಶವು ಒಂದೊಂದು ಹೆಜ್ಜೆಯಾಗಿ ಪರಿಣಮಿಸಿದಾಗ ಇನ್ನೊಂದು ಹೆಜ್ಜೆ ಭೂಮಿಯನ್ನು ಧಾರೆಯಾಗಿ ಎರೆಯಲು ಸ್ಥಳದ ಅಭಾವದಿಂದ ವಂಚಿತನಾದ ಬಲಿಯು ತನ್ನ ಶಿರವನ್ನೊಡ್ಡುವನು. ಶ್ರೀ ವಿಷ್ಣು ಪರಮಾತ್ಮನು ತನ್ನ ಚರಣ ಕಮಲಗಳಿಂದ ಪಾತಾಳಕ್ಕೆ ತಳ್ಳುವನು.

ಬಲಿದಾನಕ್ಕೆ ಮನಸೋತ ವಿಷ್ಣು ಪಾತಾಳದ ಸಾರ್ವಭೌಮತ್ವ ಹಾಗೂ ಇಂದ್ರನ ಪದವಿಯನ್ನು ಬಲಿಗೆ ನೀಡಿ ಅವನಿಂದ ಅಪೇಕ್ಷಿತ ವರವನ್ನು ಕೇಳಿದನು. ನನ್ನ ರಾಜ್ಯದಲ್ಲಿ ಯಾರು 3 ದಿನಗಳವರೆಗೆ ದೀಪವನ್ನು ದಾನವನ್ನಾಗಿ ನೀಡುತ್ತಾರೋ ಅವರಲ್ಲಿ ನಿನ್ನ ಸಹಧರ್ಮಿಣಿ (ಲಕ್ಷ್ಮೀ) ಚಿರಸ್ಥಾಯಿಯಾಗಲೀ ಎಂದು ಬಲಿಯು ಪರಮಾತ್ಮನಿಂದ ವರ ಬೇಡಿದಾಗ ಶ್ರೀ ಹರಿಯು ತಥಾಸ್ತು ಎಂದು ಕರುಣಿಸುತ್ತಾನೆ.

ಧರ್ಮಸಿಂಧು ಪುರಾಣದನ್ವಯ ಬಲಿ ರಾಜ್ಯದಲ್ಲಿ ದೀಪ ಬೆಳಗಿಸುವದರಿಂದ ಲಕ್ಷ್ಮೀ ಅಲ್ಲಿ ಚಿರಸ್ಥಾಯಿಯಾಗಿ ನೆಲೆಸುವಳು. ದೀಪವೆಂದರೆ ಕೇವಲ ಬೆಳಕಾಗಿರದೇ ಅದು ಲಕ್ಷ್ಮೀಯೇ ಆಗಿರುವದರಿಂದ ಅಶ್ವಿಜಬಹುಳ ಅಮಾವಾಸ್ಯೆಯ ದೀಪಾವಳಿಯಂದು ಲಕ್ಷ್ಮೀ ಪೂಜೆಯು ಜನಾದರಣೀಯವಾಗಿದೆ. ಲಕ್ಷ್ಮೀಯು ಜ್ಯೋತಿ ಸ್ವರೂಪಿಣಿ.

ಸಕಲ ಶಕ್ತಿ ಶ್ರೇಯಸ್ಸುಗಳಿಗೆ ಕಾರಣಗಳು. ಸೂರ್ಯ ಚಂದ್ರ ಅಗ್ನಿ ವಿದ್ಯುತ್ ಮತ್ತು ನಕ್ಷತ್ರ ಮೊದಲಾದ ಜ್ಯೋತಿರ್ವಸ್ತುಗಳಲ್ಲಿ ವಿರಾಜಮಾನಳಾಗಿರುವ ಅವಳ ಕೃಪಾ ಕಟಾಕ್ಷವು ಯಶಸ್ಸಿಗೆ ಸಕಲರಿಗೆ ಪ್ರಾಪ್ತವಾಗುವದು ಅವಶ್ಯ. ಬಂಗಾಲದಲ್ಲಿ ನದಿ ಕೆರೆ ಸರೋವರಾದಿ ಜಲಾವೃತ ಪ್ರದೇಶಗಳಲ್ಲಿ ವರ್ಣಮಯ ದೀಪ ದೋಣಿಯನ್ನು ತೇಲಿಸುತ್ತಾರೆ. ಅಂದು ಮೃಣ್ಮಯ ಕಾಳೀ ವಿಗ್ರಹವನ್ನು ಮಾಡಿ ಲಕ್ಷ್ಮೀ ಪೂಜೆಯನ್ನು ನೆರವೇರಿಸುತ್ತಾರೆ.

ಬಲಿಪಾಡ್ಯಮಿ :- ಈ ದಿನವು ಗೋಕ್ರೀಡೆಗೆ ಹೆಸರುವಾಸಿಯಾಗಿದೆ. ಬೆಳಿಗ್ಗೆ ಗೋ ಪೂಜೆಯನ್ನು ಮಾಡಿ ಸಂಜೆ ಬಲೀಂದ್ರನ ವಿಗ್ರಹವನ್ನು ಅಕ್ಕಿ ಹಿಟ್ಟು ಇಲ್ಲವೇ ಸಗಣಿಯಿಂದ ನಿರ್ಮಿಸಿ ಕೈಗೆ ಬಂದ ಫಸಲಿನಿಂದ ಅದನ್ನು ಸಿಂಗರಿಸಿ ಶೋಡಶ ಉಪಚಾರದಿಂದ ವಿಗ್ರಹವನ್ನು ಪೂಜಿಸುವದು. ಅಂದು ಬಲೀಂದ್ರ ಭೂಲೋಕಕ್ಕೆ ಬಂದು ಮೂರು ಮುಕ್ಕಾಲುಗಳಿಗೆ ಇರುವನೆಂದು ಜನರ ನಂಬಿಕೆ.

ದೀಪಾವಳಿಯನ್ನು ಐದು ದಿನಗಳವರೆಗೆ ಆಚರಿಸುವವರು ಭಾವನ ಬಿದಿಗೆ, ಅಕ್ಕನ ತದಿಗೆ, ಹಾಗೂ ಕಡೆಯಪಂಚಮಿ ಎಂದು ಪಂಚಮಿಯವರೆಗೆ ಇದನ್ನು ಆಚರಿಸುವರು. ಭಾವನ ಬಿದಿಗೆಯ ದಿವಸ ಸಹೋದರಿಯರ ಮನೆಯಲ್ಲಿ ಸಹೋದರಿಯ ಕೈಯಲ್ಲಿ ಊಟವನ್ನು ಸ್ವೀಕರಿಸಬೇಕೆಂದು ಯಮರಾಜನು ಹಾಗೆ ಮಾಡಿದನೆಂದು ಅಕ್ಕನ ತದಿಗೆಯ ದಿವಸ ಸಹೋದರಿಯರಿಗೆ ಔತಣ ನೀಡಬೇಕೆಂದು ಪುರಾಣ ಪ್ರಸಿದ್ಧಿಯನ್ನು ಪಡೆದಿದೆ. ಇದನ್ನು ಬಂಧು ದ್ವಿತಿಯೇ ಮತ್ತು ಭಗಿನಿತೃತಿಯೇ ಎನ್ನುವರು.

ಕತ್ತಲೆಯಿಂದ ಬೆಳಕಿನ ಕಡೆಗೆ ನಮ್ಮನ್ನು ಒಯ್ಯುವ ಈ ಹಬ್ಬ ಬೆಳಕಿನ ಕಡೆಗೆ ನಮ್ಮ ಮನಸ್ಸು ನಿರಂತರವಾಗಿ ಊರ್ಧ್ವಮುಖವಾಗಿರಬೇಕೆಂದು ದಿವ್ಯ ಸಂದೇಶವನ್ನು ಬೀರಿ ನಮ್ಮ ಬಾಳಿಗೆ ಶುಭವನ್ನು ಹಾರೈಸುತ್ತದೆ.





## ಜ್ಞಾನಾರ್ಜನೆ

ಕೆ. ಎನ್. ರಾಜಶೇಖರಯ್ಯ, ಶಿಕ್ಷಣ ಉಪನ್ಯಾಸಕರು, ಎಸ್.ಆರ್.ಪಿ.ಯು ಕಾಲೇಜು, ಮಲ್ಲಪ್ಪನಹಳ್ಳಿ, ಹೊಸದುರ್ಗ ರೋಡ್-577 554, ಚಿತ್ರದುರ್ಗ ಜಿಲ್ಲೆ.

ವಿದ್ಯೆಯ ಮತ್ತೊಂದು ಮುಖವೇ ಜ್ಞಾನ. ಜ್ಞಾನಾರ್ಜನೆ ಶಿಕ್ಷಣದ ಗುರಿಗಳಲ್ಲಿ ಒಂದಾಗಿದೆ. ಜ್ಞಾನ ಎಂದರೆ ತಿಳಿಯುವುದು. ಜ್ಞಾನಾರ್ಜನೆ ಎಂದರೆ ಜ್ಞಾನವನ್ನು ಸಂಪಾದಿಸುವುದು. ಜ್ಞಾನ ಸಂಪಾದಿಸುವುದು ಪ್ರತಿಯೊಬ್ಬ ವ್ಯಕ್ತಿಯ ಮುಖ್ಯ ಗುರಿಯಾಗಿರುತ್ತದೆ. ಜ್ಞಾನಗಳಿಸುವುದರ ಮೂಲಕ ವ್ಯಕ್ತಿ ಪ್ರಕಾಶಮಾನವಾಗಿ ಬೆಳಗುತ್ತಾನೆ. ಜ್ಞಾನ ಸಂಪಾದನೆಯ ಮೂಲಕ ವ್ಯಕ್ತಿ ಪ್ರಗತಿ ಹೊಂದುವನು. ಆದ್ದರಿಂದ ಪ್ರತಿಯೊಬ್ಬರಿಗೂ ಅತ್ಯಾವಶ್ಯಕವಾಗಿರುವುದರಿಂದಲೇ ಬೇಕನ್ ಎಂಬುವನು "ಜ್ಞಾನವೇ ಶಕ್ತಿ" ಎಂದು ಹೇಳಿದ್ದಾನೆ. ವ್ಯಕ್ತಿ ಸದಾ ಜ್ಞಾನಾರ್ಜನೆಯಲ್ಲಿ ತೊಡಗುವುದರಿಂದ ಅವನನು ಇಡೀ ಪ್ರಾಣಿ ವರ್ಗದಲ್ಲಿಯೇ ಅತಿ ಶ್ರೇಷ್ಠನೆನಿಸಿದ್ದಾನೆ. ಬುದ್ಧಿಜೀವಿ ಎನಿಸಿಕೊಂಡಿದ್ದಾನೆ. ಸೃಜನ ಶೀಲ ವ್ಯಕ್ತಿ ಎನಿಸಿಕೊಂಡಿದ್ದಾನೆ. ಸಂಶೋಧಕ ಮನೋಭಾವವನ್ನು ಬೆಳೆಸಿಕೊಂಡಿದ್ದಾನೆ. ಹೊಸ ಹೊಸ ಆವಿಷ್ಕಾರಗಳಲ್ಲಿ ತೊಡಗಿದ್ದಾನೆ. ಸಮಾಜದಲ್ಲಿ ಗೌರವಾನ್ವಿತನೆನಿಸಿಕೊಂಡಿದ್ದಾನೆ. ಜ್ಞಾನದಿಂದಲೇ ಸದ್ಗುಣ ಬೆಳೆಯುತ್ತದೆಂದು ಸಾಕ್ರಟೀಸ್ ಹೇಳಿದ್ದಾನೆ. ಜ್ಞಾನಾರ್ಜನೆಯ ಮೂಲಕ ಹೆಚ್ಚಿನ ಚಿಂತನೆ ಆಲೋಚನೆ, ವಿವೇಚನೆ, ವಿಮರ್ಶೆ, ಹಾಗೂ ತಾಂತ್ರಿಕ ಶಕ್ತಿ ಬೆಳೆಯುತ್ತದೆ. ಜ್ಞಾನ ಇಲ್ಲದವನು ಪಶುವಿಗೆ ಸಮಾನ. ಆದ್ದರಿಂದ ಸರ್ವಜ್ಞ ಹೀಗೆ ಹೇಳುತ್ತಾನೆ.

ಜ್ಞಾನದಿಂದಲೇ ಇಹವು, ಜ್ಞಾನದಿಂದಲೇ ಪರ
ಜ್ಞಾನವಿಲ್ಲದಿರೆ ಸಕಲವು ತನಗಿದ್ದು
ಹಾನಿಕಾಣಯ್ಯ ಸರ್ವಜ್ಞ.

ಅಲ್ಲಮ ಪ್ರಭು ಹೀಗೆ ಹೇಳುತ್ತಾರೆ

ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ
ಅವು ಜಗಕ್ಕಿಕ್ಕಿದ ವಿಧಿ ನಿನ್ನೊಡವೆಯೆಂಬುದು
ಜ್ಞಾನ ರತ್ನ ಅಂತಪ್ಪ, ಜ್ಞಾನ ರತ್ನವ
ಕೆಡುಗುಡದೆ ನೀನಲಂಕರಿಸಿಯಾದೊಡೆ
ನಿನ್ನಿಂದಕರಿಲ್ಲ ಕಾಣಾ ಗುಹೇಶ್ವರ.

ಮನುಷ್ಯನಿಗೆ ನಿಜವಾದ ಒಡವೆ ಎಂದರೆ ಬೆಳ್ಳಿ ಬಂಗಾರಗಳಿಂದ ಮಾಡಿದ ಒಡವೆಗಳಲ್ಲ. ರೇಷ್ಮೆ ಜರತಾರಿ ಮುಂತಾದ ಬಟ್ಟೆಗಳಲ್ಲ. ಅಧಿಕಾರ ಪದವಿ ಪಟ್ಟಗಳಲ್ಲ. ಜ್ಞಾನ ಸೂರ್ಯನಷ್ಟೇ ಪ್ರಕಾಶಮಾನವಾದುದು. ಜ್ಞಾನ ಸಂಪಾದಿಸುವ ಹಂಬಲ

ದಿಂದ ಅನೇಕ ಸಾಧು ಸಂತರು, ಶರಣರು, ತಪಸ್ಸು ಮಾಡಿದರು. ಯೋಗ ಸಾಧನೆ ಮಾಡಿದರು. ಇಡೀ ತಮ್ಮ ಜೀವನವನ್ನೇ ಮುಡುಪಾಗಿಟ್ಟು ಮಹಾನುಭಾವರಾದರು. ಅವರು ಜ್ಞಾನಿಗಳಾಗುವುದೇ ನಿಜವಾದ ಧರ್ಮ ಎಂದು ನಂಬಿದ್ದರು. ಜ್ಞಾನ ಪರಸ್ಪರ ಪ್ರೇಮದಿಂದ ಬಾಳುವ ಕಲೆಯನ್ನು ಕಲಿಸುತ್ತದೆಂಬು ತಿಳಿದಿದ್ದರು. ಜ್ಞಾನದ ಮೂಲಕ ಪ್ರಪಂಚ ಮಿಥ್ಯವಲ್ಲ. ಜೀವನ ಸತ್ಯವೆಂದು ನಂಬಿ ಅದರಂತೆ ನಡೆದರು ತಾವು ಸಂಪಾದಿಸಿದ ಜ್ಞಾನದ ಬೆಳಕಿನಲ್ಲಿ ಜೀವನದ ಸಾರ್ಥಕತೆಯನ್ನು ಕಂಡುಕೊಂಡರು. ಆದುದರಿಂದಲೇ ಅವರುಗಳ ಆದರ್ಶಗಳನ್ನು ಆಧಾರವಾಗಿಟ್ಟುಕೊಂಡು ಚಿಕ್ಕಂದಿನಿಂದಲೇ ಮಕ್ಕಳನ್ನು ಜ್ಞಾನಾರ್ಜನೆಯತ್ತ ತೊಡಗಿಸಬೇಕು. ಜ್ಞಾನದಾಹವನ್ನು ಮೂಡಿಸಬೇಕು. ಜ್ಞಾನ ಎಂಬುದು ಬಾಳಿನ ನಿಧಿ. ಜ್ಞಾನ ಬದುಕಿನ ಜೀವನಕ್ಕೆ ದಾರಿ ದೀಪವೂ ಹೌದು. ನಂದಾ ದೀಪವೂ ಹೌದು. ಉಪನಿಷತ್ತು "ನಹೀ ಜ್ಞಾನೇನ ಸದೃಶಂ" ಎಂದು ಹೇಳಿದೆ. ಅಂದರೆ ಜ್ಞಾನಕ್ಕೆ ಸರಿಸಮಾನದ ವಸ್ತು ಬೇರೊಂದಿಲ್ಲದಿರುವುದರಿಂದಲೇ ಬಸವಣ್ಣನವರು ಹೀಗೆ ಹೇಳಿದ್ದಾರೆ.

ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯ
ಜ್ಯೋತಿಯ ಬಲದಿಂದ ತಮಂಧದ ಕೇಡು ನೋಡಯ್ಯ
ಸತ್ಯದ ಬಲದಿಂದ ಅಸತ್ಯದ ಕೇಡು ನೋಡಯ್ಯ
ಪರುಷದ ಬಲದಿಂದ ಅವಲೋಹದ ಕೇಡು ನೋಡಯ್ಯ
ಕೂಡಲ ಸಂಗನ ಶರಣರ ಅನುಭಾವದಿಂದ
ಎನ್ನ ಮನದ ಕೇಡು ನೋಡಯ್ಯ.

ಜ್ಞಾನದ ಬಲದಿಂದ ಅಜ್ಞಾನ, ಬೆಳಕಿನ ಪ್ರಭಾವದಿಂದ ಕತ್ತಲೆ, ಸತ್ಯದ ಬಲದಿಂದ ಅಸತ್ಯ ತೊಲಗುವಂತೆ ನಡೆ-ನುಡಿ ಪರಿಶುದ್ಧವಾಗಿರುವ ಶರಣರ ಅನುಭವಾಮೃತದಿಂದ ನಮ್ಮ ಅಜ್ಞಾನದ ಪೊರೆ ಕಳಚಿ ಅರಿಷಡ್ವರ್ಗಳನ್ನು ಜಯಿಸಿ ಆಶಾಪಾಶದಿಂದ ದೂರವಾಗಿ ನಿರ್ಮಲ ಚಿತ್ತರಾಗಿರಲು ಸಾಧ್ಯವಾಗುತ್ತದೆ. ಶರಣರ ದೃಷ್ಟಿಯಲ್ಲಿ ಸಿರಿ ಸಂಪತ್ತೆಂದರೆ ಜ್ಞಾನ. ಜ್ಞಾನವು ಶ್ರದ್ಧಾಪೂರ್ಣವ್ಯಾಸಂಗದಿಂದ ಮಾತ್ರ ಲಭಿಸುತ್ತದೆ. ತೈತ್ತರೇಯ ಉಪನಿಷತ್ತಿನಲ್ಲಿ ಜ್ಞಾನ ಸಂಗ್ರಹಕ್ಕಾಗಿ ಎಲ್ಲಾ ದಿಕ್ಕುಗಳ ಕಿಟಕಿ ಬಾಗಿಲುಗಳು ತೆರದಿರಲಿ ಎಂದು ಹೇಳಿದೆ. ಆದ್ದರಿಂದ ಜ್ಞಾನದ ಮೂಲ ತಳಹದಿಯೇ ಓದು. ಪೆಲ್ಡ್ ಹ್ಯಾಮ್ ಹೇಳುವಂತೆ ಜ್ಞಾನ ಮನಸ್ಸಿನ ನಿಧಿ. ವಿವೇಚನೆ ಅದರ ಕೀಲಿ ಕೈ. ಅದಿಲ್ಲದಿದ್ದರೆ ಜ್ಞಾನ ವ್ಯರ್ಥ. ವ್ಯವಹಾರಿಕ ವಿವೇಕ ಅತಿ ಶ್ರೇಷ್ಠ. ಏಕೆಂದರೆ ಯಾವ ವ್ಯಕ್ತಿಗೆ ಅತಿ ಹೆಚ್ಚು ಜ್ಞಾನ ಇರುತ್ತದೋ ಅವನೇ ಸದ್ಗುಣಿಯೂ ಸುಶಿಕ್ಷತನೂ ಆಗಿರುತ್ತಾನೆ ಎಂಬ ಭಾವನೆ ಇದೆ. ಜ್ಞಾನದ ಮೂಲಕ ವಿವೇಕ ಬರುತ್ತದೆಂಬುದು ಶಿಕ್ಷಣ ತಜ್ಞರ ನಂಬಿಕೆ.



ನಾವಿಂದು ಗಳಿಸುವ ಜ್ಞಾನ ಒಂದು ಅಮೂಲ್ಯವಾದ ಆಸ್ತಿ ಇದ್ದಂತೆ. ಇದನ್ನು ಯಾರು ಅಪಹರಿಸಲು ಸಾಧ್ಯವಿಲ್ಲ. ಜ್ಞಾನವು ವ್ಯಕ್ತಿಯ ಜೀವಾಳವೂ ಹೌದು. ಮನುಷ್ಯ ಮನುಷ್ಯನನ್ನು ಅರ್ಥಮಾಡಿಕೊಳ್ಳುವರು. ಸುಸಂಸ್ಕೃತನಾಗರೀಕರಾಗುವರು. ಬದಲಾಗುವ ಪರಿಸರಕ್ಕೆ ತಕ್ಕಂತೆ ಹೊಂದಿಕೊಳ್ಳುವ ಸಾಮರ್ಥ್ಯವನ್ನು ಪಡೆದುಕೊಳ್ಳುವರು. ಅಂಥ ಜ್ಞಾನ ಸಂಪಾದನೆಗಾಗಿ ತಮ್ಮ ಅಮೂಲ್ಯ ಸಮಯವನ್ನು ವಿನಿಯೋಗಿಸಬೇಕು. ಕಾಯಾ, ವಾಚಾ, ಮನಸಾ, ಶ್ರದ್ಧೆ ಇರಬೇಕು. ಆಗಲೇ ಜ್ಞಾನ ಲಭಿಸಲು ಸಾಧ್ಯವಾದೀತು. ಒಮ್ಮೆ ಗಳಿಸಿದ ಜ್ಞಾನ ನಿಂತ ನೀರಿನಂತಾಗಬಾರದು. ಆಗಾಗ ಒಂದಲ್ಲ ಒಂದು ರೂಪದಲ್ಲಿ ನವೀಕರಣವಾಗುತ್ತಿರಬೇಕು. ಜ್ಞಾನದ ನವೀಕರಣವು ಒಂದು ರೀತಿಯ ಸ್ನಾನದ ಕ್ರಿಯೆಯಂತೆ. ಒಮ್ಮೆ ಸ್ನಾನ ಮಾಡಿದರೆ ಸಾಕೆ ? ನಿತ್ಯವೂ ಸ್ನಾನ ಮಾಡುತ್ತಿರಬೇಕು. ಅಂತೆಯೇ ಜ್ಞಾನದ ಮೂಲಕ ಹೊಸತನವನ್ನು ಬೆಳಸಿಕೊಳ್ಳಬೇಕು.

ಜ್ಞಾನ ಎಂದರೆ ? ಅದನ್ನು ಸಂಪಾದಿಸುವುದು ಹೇಗೆ ಎಂಬ ಬಗ್ಗೆ ಭಗವದ್ಗೀತೆ ಹೀಗೆ ತಿಳಿಸುತ್ತದೆ.

ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ
ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವ ದರ್ಶಿನಃ ||

ಅಂದರೆ ಜ್ಞಾನವನ್ನು ದೀರ್ಘ ನಮಸ್ಕಾರದಿಂದಲೂ, ಪರಿಪ್ರಶ್ನೆಯಿಂದಲೂ, ಗುರು ಶುಶ್ರೂಷೆಯಿಂದಲೂ, ತಿಳಿದುಕೋ ತತ್ವವನ್ನು ಅರಿತ ಜ್ಞಾನಿಗಳು ನಿನಗೆ ಅದನ್ನು ಉಪದೇಶ ಮಾಡುವರು. ಆದ್ದರಿಂದ ಜ್ಞಾನ ಎಂದರೆ ಅದು ಕೇವಲ ವಿಷಯ ಸಾರ ಸಂಗ್ರಹವಲ್ಲ. ಕೇವಲ ಮಾಹಿತಿಗಳ ಒಟ್ಟು ಮೊತ್ತವಲ್ಲ. ಅದು ಆತ್ಮ ಸಂಸ್ಕಾರವೇ ವಿನಃ ಅಕ್ಷರ ಜ್ಞಾನವಲ್ಲ. ಮನುಷ್ಯನಲ್ಲಿರುವ ರಾಕ್ಷಸೀ ಪ್ರವೃತ್ತಿಗಳನ್ನು ಅಳಿಸಿ, ಅವನ ಹೃದಯವನ್ನು ಸಂಸ್ಕರಿಸಿ ಮಾನವೀಯತೆಯ ಔದಾರ್ಯ ಗುಣಗಳಿಂದ ಸುಸಂಸ್ಕೃತನನ್ನಾಗಿ ಪರಿವರ್ತಿಸುವ ಶಕ್ತಿಯೇ ಜ್ಞಾನ. ಜ್ಞಾನದಿಂದ ಪರಸ್ಪರ ಅರಿವು, ತಿಳುವಳಿಕೆ ಬೆಳೆಯುತ್ತದೆ. ತನ್ನಲ್ಲಿರುವ ಅಜ್ಞಾನ, ಅಹಂಕಾರ, ದಾರಿದ್ರ್ಯ, ಕೆಟ್ಟತನ, ಸಂಕುಚಿತ ಮನೋಭಾವಗಳನ್ನು ದೂರ ಮಾಡುವುದು. ಹೀಗಾಗಿಯೇ ಜ್ಞಾನವು ಶಿಕ್ಷಣದ ಮೂಲ ಚೇತನವಾಗಿದೆ. ಸಮಾಜದ ಪ್ರಗತಿಗೆ ಸಹಕಾರಿಯಾಗಿದೆ. ಮಾನವನ ಸುಖ-ಸಂತೋಷಗಳಿಗೆ ಆಧಾರವಾಗಿದೆ. ನೈತಿಕ ಗುಣಗಳ ಬಲವರ್ಧನೆಗೆ ಕಾರಣವಾಗಿದೆ ಮೂಢ ನಂಬಿಕೆಗಳ ನಿವಾರಣೆಗೆ ಮಾರ್ಗದರ್ಶನ ಹಾಗೂ ನಿರ್ದೇಶನ ನೀಡುತ್ತದೆ. ಸರ್ವತೋಮುಖ ಪ್ರಗತಿಯತ್ತ ಮುನ್ನಡೆಸುತ್ತದೆ.

ಹೀಗಾಗಿ, ಈ ದಿಶೆಯಲ್ಲಿ ಜ್ಞಾನವು ಒಂದು ದಿವ್ಯಶಕ್ತಿ ಆಗಿದೆ. ಇಂದಿನ ವಿಶ್ವದ ನಿರಂತರ ಪರಿವರ್ತನೆಗೆ ಜ್ಞಾನವೇ ಮೂಲ ಕಾರಣವಾಗಿದೆ. ಜ್ಞಾನವು ವ್ಯಕ್ತಿಯನ್ನು

ಹೆಜ್ಜೆ ಹೆಜ್ಜೆಗೂ ತೀಕ್ಷ್ಣಗೊಳಿಸುತ್ತದೆ. ಅಷ್ಟೇ ಅಲ್ಲ ವಿಶ್ವದ ಪ್ರಗತಿಗೆ ಮತ್ತು ಅವನತಿಗೆ ಕಾರಣವಾಗಿದೆ ಎಂಬುದಕ್ಕೆ ಮನುಕುಲದ ಇತಿಹಾಸವೇ ಇಂದು ಜೀವಂತ ಸಾಕ್ಷಿ ಆಗಿದೆ.

ಮಗುವಿನ ಸರ್ವತೋಮುಖ ವಿಕಾಸಕ್ಕೆ ಕಾರಣವಾದುದೇ ಜ್ಞಾನ. ಜ್ಞಾನ ಒಂದು ಅನಂತವಾಹಿನಿ. ಒಂದು ಮಹಾನದಿಗೆ ಎಷ್ಟು ಉಪನದಿಗಳು ಬಂದು ಸೇರಿವೆಯೋ, ಬಂದು ಸೇರುತ್ತವೆಯೋ ಯಾರು ಬಲ್ಲರು? ಐಹಿಕ-ಆಧ್ಯಾತ್ಮಿಕವಾಗಿ ಅತ್ಯಂತ ಮಹತ್ವವಾದುದೆಂದರೆ ಜ್ಞಾನ. ಉಳಿದ ಎಲ್ಲಾ ಸದ್ಗುಣಗಳು ಜ್ಞಾನವನ್ನು ಅವಲಂಬಿಸಿವೆ. ಜ್ಞಾನಾರ್ಜನೆ ಅಥವಾ ಜ್ಞಾನ ಸಂಪಾದನೆಗೆ ಅಂತ್ಯವಿಲ್ಲ. ಜ್ಞಾನವು ಮನುಷ್ಯತ್ವವನ್ನು ಉಳಿಸಿ ಬೆಳೆಸಿ ರಕ್ಷಿಸಿ-ಪಾಲನೆ ಪೋಷಣೆ ಮಾಡುವ ಸಂಜೀವಿನಿ ಇದ್ದಂತೆ. ಜ್ಞಾನದಿಂದ ಸಂಸ್ಕೃತಿ ಬೆಳೆಯುತ್ತದೆ. ಸಕಲ ಸೌಭಾಗ್ಯಗಳು ದೊರೆಯುತ್ತವೆಂದು ಹಿತೋಪದೇಶ ತಿಳಿಸುತ್ತದೆ.

ಜ್ಞಾನಾರ್ಜನೆಯ ಅವಶ್ಯಕತೆಯ ಮಹತ್ವವನ್ನು ಇಸ್ಲಾಂ ಧರ್ಮ ಬಲವಾಗಿ ಪ್ರತಿಪಾದಿಸಿದೆ. ಜ್ಞಾನಕ್ಕೆ ಅನ್ವಯಿಸುವ ಪ್ರವಾದಿ ಮಹಮದ್ ಪೈಗಂಬರರ ಕೆಲವು ಅಭಿಪ್ರಾಯಗಳು ಹೀಗಿವೆ.

- ಜ್ಞಾನಾರ್ಜನೆಗಾಗಿ ಚೀನಾದ ತುದಿಯವರೆಗೆ ಹೋಗಬೇಕಾಗಿ ಬಂದರೆ ಹಿಂಜರಿಯದಿರಿ.
- ಬಾಲ್ಯದಲ್ಲಿ ಗಳಿಸಿದ ಜ್ಞಾನ ಕಲ್ಲಿನಲ್ಲಿ ಕೆತ್ತಿದಂತೆ, ವೃದ್ಧಾಪ್ಯದಲ್ಲಿ ಗಳಿಸಿದ ಜ್ಞಾನ ನೀರಿನಲ್ಲಿ ಬರೆದಂತೆ.
- ವೆಚ್ಚ ಮಾಡಿದಷ್ಟು ಸಂಪತ್ತು ಕಡಿಮೆ ಆಗುತ್ತದೆ. ಆದರೆ ಕಲಿತಷ್ಟು ಜ್ಞಾನ ಅಧಿಕವಾಗುತ್ತದೆ.
- ಜ್ಞಾನಾರ್ಜನೆಯಲ್ಲಿ ತೊಡಗಿಸಿದಕಾಲ ದೇವಾರಾಧನೆಯಲ್ಲಿ ತೊಡಗಿಸಿದ ಕಾಲವೆಂದು ತಿಳಿ.

ವಚನಕಾರರ ಪ್ರಕಾರ ಶಿಕ್ಷಣ ಎಂದರೆ ಓದು. ಜ್ಞಾನ ಸಂಪಾದನೆಗೆ ಓದೆಂಬುದು ಗಿಳಿಪಾಠವಲ್ಲ. ಓದಿ ತಿಳಿದು ಆದರಂತೆ ನಡೆಯುವುದು. ಅದಕ್ಕಾಗಿಯೇ ಹೇಳುವುದು "ತನ್ನ ತಾನರಿಯಲು ಜ್ಞಾನ ಬೇಕು." ಶರಣರು ಜ್ಞಾನವಿಲ್ಲದ ಕ್ರಿಯೆಯನ್ನಾಗಲಿ ಅಥವಾ ಕ್ರಿಯೆಯಿಲ್ಲದ ಜ್ಞಾನವನ್ನಾಗಲಿ ಒಪ್ಪಿಕೊಂಡವರಲ್ಲ. ಅರಿವು ಹಾಗೂ ಆಚಾರ ಅವರ ದೃಷ್ಟಿಯಲ್ಲಿ ಒಂದು ವಸ್ತುವಿನ ಎರಡು ಮುಖಗಳು.



ಕ್ರಿಯೆಯೇ ಜ್ಞಾನ, ಅಜ್ಞಾನವೇ ಕ್ರಿಯೆ
ಜ್ಞಾನವೆಂದರೆ ತಿಳಿಯುವುದು
ಕ್ರಿಯೆ ಎಂದರೆ ತಿಳಿದಂತೆ ಮಾಡುವುದು.
ಪರಸ್ತ್ರೀಯ ಭೋಗಿಸಬಾರದೆಂಬುದು ಜ್ಞಾನ
ಅದರಂತೆ ಆಚರಿಸುವುದೇ ಕ್ರಿಯೆ
ಅಂತು ಆಚರಿಸದಿದ್ದರೆ ಅದೇ ಅಜ್ಞಾನ ನೋಡಾ
ಕೂಡಲಸಂಗಮ ದೇವ.

ಜ್ಞಾನ ಎಂದರೆ ತಿಳಿಯುವುದು. ಕ್ರಿಯೆ ಎಂದರೆ ತಿಳಿದಂತೆ ಮಾಡುವುದು ಎಂದು ಚನ್ನಬಸವಣ್ಣನವರು ಹೇಳಿದರೆ, "ಓದಿದೆ ಓದಿನೆನೆಂದಡೆ" ನಿನ್ನೋದು ವಾದಕ್ಕೆ ಹೋಯಿತು ಎಂದು ತಿಳಿದುಕೊಂಡು ಗರ್ವ ಪಡುವವರಿಗೆ ಸಿದ್ಧರಾಮರು ತುಂಬಾ ಮಾರ್ಮಿಕವಾಗಿ ಹೀಗೆ ಹೇಳಿದ್ದಾರೆ.

ಜ್ಞಾನವೆಂದು ವಿವಾದಿಸುವ ಅಣ್ಣಗಳಿರಾ ಕೇಳಿರಯ್ಯ
ಜ್ಞಾನವೆಂದರೆ ಮಹತ್ವಗಳ ಮಾಡಿ ಮೆರೆದುದೇ ? ಅಲ್ಲಲ್ಲ
ಜ್ಞಾನವೆಂದರೆ ಸುಖದುಃಖಗಳ ಹೇಳಿದುದೇ ? ಅಲ್ಲಲ್ಲ
ಇವೆಲ ಸಾಧನೆಗಳು (ಚಿಲ್ಲರೆ)
ನಿನ್ನ ಅರಿವು ಕೈಕರಣವಾಗುವುದು ಜ್ಞಾನ.

ಆದ್ದರಿಂದ ತನ್ನನ್ನು ತಾನು ಅರಿಯುವಂತಹ, ನಿಜವನ್ನು ತಿಳಿಯುವಂತಹ' ನುಡಿದಂತೆ ನಡೆಯುವಂತಹ ಜ್ಞಾನವನ್ನು ಮೂಡಿಸುವಂತಹ ಶಾಲೆಗಳು ಇಂದು ಅವಶ್ಯಕವೇ ವಿನಃ ಹಣದಾಸೆಗಾಗಿ ಸ್ಥಾಪನೆ ಆಗುವ ಶಾಲೆಗಳಿಂದ ಏನು ಪ್ರಯೋಜನವಿಲ್ಲ.

ಆದರೆ, ಇಂದು ಮನುಷ್ಯ ತನ್ನ ಜ್ಞಾನದ ಹೆಸರಿನಲ್ಲಿ ಮಾನವೀಯತೆಯನ್ನು, ಮನುಷ್ಯತತ್ವವನ್ನು ಕಳೆದುಕೊಳ್ಳುತ್ತಿದ್ದಾನೆ. ಹೀಗಾಗಿ, ಯಾರು ಜ್ಞಾನಿಗಳಾಗಿರಬೇಕೋ, ಆದರ್ಶವ್ಯಕ್ತಿಗಳಾರಾಗಿರಬೇಕೋ, ಅನುಕರಣಾಯೋಗ್ಯಗಿರ ಬೇಕಾಗಿತ್ತೋ ಅಂತಹವರು ಹೆಚ್ಚು ಕಡಿಮೆ ಸ್ವಾರ್ಥಿಗಳಾಗಿದ್ದಾರೆ. ವಿಷಯ ಲಂಪಟರಾಗಿದ್ದಾರೆ. ಒಬ್ಬರಿಂದೊಬ್ಬರಿಗೆ ಚಾಡಿಹೇಳುತ್ತಾರೆ. ಕಾಂಚನಾ-ಕಾಮಿನಿಗಳ ಮೋಡಿಗಳಾಗುತ್ತಿ

ದ್ದಾರೆ. ಸಮಾಜ ಘಾತಕ ವ್ಯಕ್ತಿಗಳಾಗಿದ್ದಾರೆ. ಭ್ರಷ್ಟಾಚಾರ, ಲಂಚಕೋರರಾಗಿದ್ದಾರೆ — — ಹೀಗಾಗಿಯೇ ಅವಿದ್ಯಾವಂತರಿಗಿಂತ ವಿದ್ಯಾವಂತರೇ ಸಮಾಜದ ಅವನತಿಗೆ ಕಾರಣರಾಗಿದ್ದಾರೆ ಎಂದರೆ ತಪ್ಪಾಗಲಾರದು. ಸಿದ್ದರಾಮೇಶ್ವರರು "ಓದುವುದು ಸದ್ಗುಣಕ್ಕಲ್ಲದೆ ಕಿವಿಯನೋಡುವುದಕ್ಕೇನೋ ಅಯ್ಯಾ" ಎಂದು ಪ್ರಶ್ನಿಸುತ್ತಾರೆ. ಇಂಥವರ ಜ್ಞಾನದ ಸ್ಥಿತಿ ಏನಾಯಿತು ಎಂಬುದನ್ನು ತಮ್ಮ ವಚನದಲ್ಲಿ ಸಿದ್ಧರಾಮೇಶ್ವರರು ಹೀಗೆ ಹೇಳಿದ್ದಾರೆ.

ಸಿದ್ಧಾಂತಿಯ ಜ್ಞಾನ ಸಾಧನೆಯಲ್ಲಿ ಹೋಯಿತ್ತು.
ವೇದಾಂತಿಯ ಜ್ಞಾನ ವಾದದಲ್ಲಿ ಹೋಯಿತ್ತು
ಕ್ರಿಯಾವಂತನ ಜ್ಞಾನ ನುಡಿಯಲ್ಲಿ ಹೋಯಿತ್ತು
ವ್ಯವಹಾರಿಕ ಜ್ಞಾನ ದ್ರವ್ಯಾರ್ಜನೆಯಲ್ಲಿ ಹೋಯಿತ್ತು
ಇವೆಲ್ಲ ಭವಕ್ಕೆ ಕಾರಣವಲ್ಲದೆ
ಭವ ರಹಿತ ಜ್ಞಾನವು ಸಾಧ್ಯವಾಗುವುದು ದುರ್ಲಭವಯ್ಯಾ
ಕಪಿಲಸಿದ್ಧ ಮಲ್ಲಿಕಾರ್ಜುನ.

ಇಂದು ವಿದ್ಯಾರ್ಥಿ ಆದವನು, ತನ್ನ ವಿದ್ಯಾರ್ಥಿ ದೆಸೆಯಲ್ಲಿ ಜ್ಞಾನದ ಪಿಪಾಸು ಆಗಬೇಕು. ಜ್ಞಾನಾರ್ಜನೆಯಲ್ಲಿ ತೊಡಗಿ ಜ್ಞಾನದಗಣಿ ಆಗಬೇಕು. ಆದರೆ, ವಿದ್ಯಾರ್ಥಿ ಅನವಶ್ಯಕವಾಗಿ ನಾನು ದುಶ್ಚಟಗಳಿಗೆ ತುತ್ತಾಗಿ ಜ್ಞಾನಾರ್ಜನೆಯಲ್ಲಿ ಸಮಯವಿಲ್ಲದೆ ತೊಳಲಾಡುತ್ತಿದ್ದಾನೆ. ಇದು ಅವನ ದುರಂತವಲ್ಲವೇ ಏನು? ಇದಕ್ಕೆ ನಾನಾ ಕಾರಣಗಳೂ ಇಲ್ಲದಿಲ್ಲ. ಕುವೆಂಪು ಹೀಗೆ ಹೇಳುತ್ತಾರೆ.

ಅಂದು ಮುಂದೆ ಗುರಿ ಇತ್ತು
ಹಿಂದೆ ಗುರು ಇದ್ದ
ಆದರೆ ಇಂದು
ಮುಂದೆ ಗುರಿಯಿಲ್ಲ
ಹಿಂದೆ ಗುರುವಿಲ್ಲ !





## ಸಂಸ್ಕೃತಿಗೆ ಮೊರೆ ಚಿಂತನ

ಪ॥ ರಾಮಕೃಷ್ಣ ಶಾಸ್ತ್ರಿ, ಶಿವಶಕ್ತಿ ನಿಲಯ, ಮಚ್ಚಿನ, ದಕ್ಷಿಣ ಕನ್ನಡ-572495.

ನಮ್ಮ ಸಂಸಾರಗಳಲ್ಲಿ ಈಚೆಗೆ ಸಂಸ್ಕೃತಿಯ ಅಭಿಮಾನ ಶಿಥಿಲಗೊಳ್ಳುತ್ತಿರುವುದರ ಕುರಿತು ಸಮಾಜ ಶಾಸ್ತ್ರಜ್ಞರು ತೀವ್ರವಾಗಿ ಎಚ್ಚರಿಸುತ್ತಿದ್ದಾರೆ. ಮುಂದಿನ ಪೀಳಿಗೆಯಲ್ಲಿ ಸಂಸ್ಕೃತಿ ಸಂವಹನ ಹೇಗೆ ಸಾಧ್ಯ ಎಂದು ಕೆಲವರು ಚಿಂತಿತರೂ ಆಗಿದ್ದಾರೆ. ಬದಲಾಗುತ್ತಿರುವ ಪರಿಸರದ ವೇಗಕ್ಕೆ ಹೊಂದಿಕೊಂಡು ಚಲಿಸಲು ಪ್ರಯತ್ನಿಸುತ್ತಿರುವುದರಿಂದಾಗಿ ಸಂಸ್ಕೃತಿಯ ಪಾಲನೆ ಸಾಧ್ಯವಾಗುತ್ತಿಲ್ಲ ಎಂದು ಕೆಲವರ ಅಂಬೋಣ.

ಈ ದೇಶದ ಸಂಸ್ಕೃತಿಗೆ ಅಧ್ಯಾತ್ಮಿಕ ತಳಹದಿ ಇದೆ. ಯಾವುದನ್ನು ಬರಿಯ ಕಂದಾಚಾರವೆಂದು ಹೀಗಳೆಯುತ್ತಿದ್ದೇವೋ ಸಹಸ್ರಾರು ವರುಷಗಳ ಹಿಂದಿನವರು ಸರ್ವಕಾಲಿಕ ಆಚರಣೆಗಾಗಿ ಶಾಸ್ತ್ರಗಳೆಂಬ ನಿಯಮಗಳನ್ನು ರೂಢಿಸಿದರೋ ಅದು ವೈಜ್ಞಾನಿಕ ಒರೆಗಲ್ಲಿಗೆ ಹಚ್ಚಿದಾಗಲೂ ಸತ್ವಪೂರ್ಣ ಎಂಬಂಶ ಬೆಳಕಿಗೆ ಬರುತ್ತಿದೆ. ಎಲ್ಲ ಆಚರಣೆಯೂ ಮನುಕುಲದ ಒಳತಿಗಾಗಿ. ಸುಖೀ ಬದುಕಿಗಾಗಿ. ನಮ್ಮ ಎಲ್ಲ ಆಚಾರ, ವಿಚಾರ, ಧರ್ಮಗಳು ಕೂಡ ಮಾನವೀಯತೆಯ ಮೂರ್ತರೂಪಗಳಾಗಿವೆ.

ಇಂದಿನ ಶಿಕ್ಷಣ ಕ್ರಮ ಮಾತ್ರ ಪಕ್ಷಪಾತಪೂರಿತವಾಗಿದೆ. ರಾಜಕೀಯ ದೃಷ್ಟಿಗನುಗುಣವಾಗಿ ರಚಿಸುವ ಪಠ್ಯಗಳು ನೀತಿ ಶಿಕ್ಷಣವನ್ನು ಮರೆಮಾಡಿವೆ. ಜಾತ್ಯತೀತ ದೇಶವೆಂಬ ಜಾಹಿರಾತಿರುವ ಕಾರಣ ಒಂದು ಧರ್ಮದಿಂದ ಮೂಡಿ ಬಂದ ಸಂಸ್ಕೃತಿ ಸಮರಸದ ಪಾಕ ಇನ್ನೊಂದು ಮತಕ್ಕೆ ಅಪಥ್ಯವಾಗಬೇಕೆಂದೇನೂ ಇಲ್ಲ. ಭಾರತೀಯ ಸನಾತನ ಸಂಸ್ಕೃತಿಯ ತತ್ವಗಳಿಂದ ಯಾವ ಮತಾವಲಂಬಿಗೂ ಬಾಧೆಯಿಲ್ಲ. ಎಲ್ಲಿಯೂ ಸಿಗದ ನೆಮ್ಮದಿ, ಮನಶ್ಶಾಂತಿ ಇದರಿಂದ ಸಿಗುತ್ತದೆಂಬ ಸತ್ಯವನ್ನರಿತೇ ವಿದೇಶೀಯರು ಈ ತತ್ವಗಳಿಗೆ ಶರಣಾಗುತ್ತಿದ್ದಾರೆ. ನಮ್ಮಲ್ಲಿ ಜಾತಿಯನ್ನು ಒಲೈಸುವ ಸ್ವಾರ್ಥ ಮನೋಭಾವದಿಂದ ದೇಶದ ಸಂಸ್ಕೃತಿಗೆ ಬೆಳಕಿಂಡಿಯಾಗುವ ವಿಚಾರಗಳನ್ನೆಲ್ಲ ಬಹಿಷ್ಕರಿಸಲಾಗುತ್ತಿದೆ. ಇದರಿಂದ ಇಂದಿನಪೀಳಿಗೆ ಸಂಸ್ಕೃತಿಯಲ್ಲಿ ಅಡಗಿರುವ ಮಹತ್ವವನ್ನು ಅರಿತುಕೊಳ್ಳಲಾಗದೆ ಬದುಕಿನ ಗುರಿಯನ್ನು ತಲಪದಂತಾಗಿದೆ.

ಮಕ್ಕಳ ಹೆತ್ತವರಿಗಂತೂ ಸಂಸ್ಕೃತಿಯ ಪಾಲನೆ ಅನಗತ್ಯ. ನಾಳೆ ಅವರ ಮಗ ವೈದ್ಯನೋ ತಂತ್ರಜ್ಞನೋ ಆಗುವ ಕನಸು ಕಾಣುತ್ತಾರೆ. ಇಂತಹವನು ಪೂಜೆ, ಪುನಸ್ಕಾರ ಎಂದು ದೇವರಿಗೆ ಅಡ್ಡಬೀಳುವುದೇಕೆ ? ಮಾನವೀಯ ಸಂಬಂಧಗಳು ಗಾಢವಾಗದೆ ನಿಸ್ತೇಜಗೊಳ್ಳಲು ಸಂಸ್ಕೃತಿಯ ಅವಗಣನೆ ಕಾರಣವೆಂದು ಅವರಿಗೆ ತಡವಾಗಿಯೂ ತಿಳಿಯುವುದಿಲ್ಲ. ಗುರು ಹಿರಿಯರನ್ನು ದೇವರಿಗೆ ಹೋಲಿಸಿ ಹಿಂದಿನವರು ಭಯ ಭಕ್ತಿಯನ್ನು ಮೂಡಿಸಿದ್ದರು. ಇಂದು ಸಂಬಳದ ಸಲುವಾಗಿ ದುಡಿಯುವ ಶಿಕ್ಷಕರು. ಶಿಕ್ಷಕರ ಬಗೆಗೆ ಗೌರವವಿಲ್ಲದೆ ಧಿಕ್ಕಾರ ಕೂಗುವ ವಿದ್ಯಾರ್ಥಿಗಳು. ತಾಯಿ

ತಂದೆಗಳೆಂಬ ಗೌರವವಿಲ್ಲದೆ ಉದ್ಯೋಗ ದೊರೆತ ಮೇಲೆ ಮುಪ್ಪಿನ ಹೆತ್ತವರನ್ನು ಕಡೆಗಣಿಸಿ, ಪ್ರತ್ಯೇಕ ಸಂಸಾರ ಹೂಡುವ ಯುವ ಜನರಿಗೆ ನಮ್ಮ ಸಂಸ್ಕೃತಿಯಲ್ಲಿ ಹಾಸು ಹೊಕ್ಕಾಗಿ ಬಂದ ಶ್ರವಣಕುಮಾರನ ಕತೆಯನ್ನು ಓದುವ ಅವಕಾಶ ಸಿಕ್ಕಿದೆಯೆ? ಅಂಥರಾದ ತಾಯಿ-ತಂದೆಗಳನ್ನು ಹೆಗಲಲ್ಲಿ ಹೊತ್ತುಕೊಂಡೇ ತೀರ್ಥಾಟನೆ ಮಾಡಿದ ಆವನ ಆದರ್ಶಗುಣವನ್ನು ಉತ್ತೇಜಿಸಬಲ್ಲ ಸಾಹಿತ್ಯ ಇಂದು ಎಲ್ಲಿ ಸಿಗುತ್ತದೆ?

ವೇದಗಳು ಸಾವಿರಾರು ವರುಷಗಳ ಮೊದಲೇ ಇಂದಿನ ವೈಜ್ಞಾನಿಕ ಆವಿಷ್ಕಾರದ ವಿವರಗಳನ್ನು ನೀಡಿದ್ದವು. ಮನುಷ್ಯ ಬದುಕುವ ಬಗೆಯನ್ನು ಸರಳವಾದ ಕತೆಗಳ ಮೂಲಕ ಪುರಾಣಗಳು ಬಿಂಬಿಸಿದ್ದವು. ಮಾನವೀಯತೆಯ ಉತ್ಕಟ ಗುಣ ನಡತೆಗಳನ್ನು ಶಾಸ್ತ್ರಗಳು ವ್ಯಕ್ತಪಡಿಸಿದ್ದವು. ಸದಾಚಾರಗಳ ಬಗೆಗೆ ಉಪನಿಷತ್‌ಗಳು ಬೋಧಿಸಿದ್ದವು. ಇದರಿಂದ ಉಕ್ತವಾದ ರೀತಿಯಲ್ಲೇ ನಮ್ಮ ಜನಜೀವನ ಸಾಗುತ್ತಿತ್ತು. ಲೋಕದ ಸಮಸ್ತರೂ ಸುಖಿಗಳಾಗಲಿ ಎಂಬ ನಿಸ್ವಾರ್ಥ ಸದಾಶಯವನ್ನು ಪ್ರತಿಪಾದಿಸಿದ್ದರೆ ಅದು ಭಾರತೀಯ ಸಂಸ್ಕೃತಿ ಮಾತ್ರವೇ ಆಗಿತ್ತು.

ಕಾಲ ಸರಿದಂತೆ ಸಂಸ್ಕೃತಿಯ ಚೌಕಟ್ಟಿನಿಂದ ಹೊರಬಂದ ಮಾನವ ತನ್ನ ಬದುಕಿನ ದಾರಿಯನ್ನು ತಾನೇ ರೂಪಿಸಿಕೊಳ್ಳಬಲ್ಲೆ, ಈ ವರೆಗೆ ತಾನು ನಡೆದು ಬಂದ ದಾರಿ ಕಂದಾಚಾರದ್ದು ಎಂದು ಭಾವಿಸಿದ್ದು ಅದೆಂಥ ವಿಪರ್ಯಾಸ. ಹೊತ್ತೇರುವ ಮುನ್ನ ಎದ್ದು ಕರಾಗ್ರೇ ವಸತೇ ಲಕ್ಷ್ಮಿ ಎಂದು ಹಾಡುತ್ತಾ ನಿತ್ಯ ವಿಧಿಗಳನ್ನು ತೀರಿಸಿ, ದೇವರ ಮುಂದೆ ಥಾಳಾಗಿ ಉರಿಸಿಟ್ಟ ನಂದಾದೀಪದ ಮುಂದೆ ಸಾಷ್ಟಾಂಗ ಎರಗುವ, ದೇವರನ್ನುಸ್ತುತಿಸುವ ಅಂದಿನ ಸಮರ್ಪಣಾಭಾವ ಈಗ ಕಾಣಸಿಗದು. ಮನೆಯೆದುರಲ್ಲಿ ರಂಗೋಲಿಯಿಡಲು ಗೃಹಿಣಿಗೆ ಪುರಸೊತ್ತಿಲ್ಲ ಡಿಸ್ಕೋ ಹಾಡಿಗೆ ಮೈ ಅಲುಗಿಸುವ ಮನೆಯ ಮಗಳಿಗೆ ಸಂಪ್ರದಾಯದ ಬಗೆಗೆ ಗೊತ್ತಿಲ್ಲ. ಆಹಾರದಲ್ಲಿ, ವಿಹಾರದಲ್ಲಿ ಆಚಾರವೇ ಲೋಪಗೊಂಡ ಮೇಲೆ ಸಂಸ್ಕೃತಿಯ ಕಾಳಜಿ ಆದಾರಿಗೆ ಉಂಟು ?

ಪ್ರತಿಯೊಬ್ಬ ಭಾರತೀಯನೂ ಕಳಕಳಿಯಿಂದ ಲಕ್ಷಿಸಬೇಕಾದ ವಿಚಾರ ಇದು. ನಮ್ಮ ಸಂಸ್ಕೃತಿ ಕೆಡಬಾರದು. ನಿತ್ಯದ ಬದುಕಿನಲ್ಲಿ ಪೂಜೆ, ಧ್ಯಾನ, ಅತಿಥಿಸತ್ಕಾರ, ಹಬ್ಬ ಹರಿದಿನ, ವ್ರತಾಚರಣೆ ಇದೆಲ್ಲಕ್ಕೂ ಒಂದಿಷ್ಟು ಅವಕಾಶ ಇರಲೇಬೇಕು. ನಮ್ಮ ಮಗು ಇಂಗ್ಲೀಷ್ ವಿಷ ಕುಡಿದು ನರಳುವ ಬದಲು ಸಂಸ್ಕೃತಿಯ ಅಮೃತಪಾನ ಮಾಡಿ ಸುಖದಿಂದ ಬದುಕಬೇಕು. ಸಂಸ್ಕೃತ ಪಾಠ ಶಿಕ್ಷಣದ ಒಂದಂಗವಾಗಬೇಕು. ಏನಿದ್ದರೂ ಮನಃ ಶಾಂತಿ ಇಲ್ಲ. ಯುವ ಜನಾಂಗ ಮಾದಕ ದ್ರವ್ಯಗಳಿಗೆ ಬಲಿಯಾಗಿ ಹಿಂಸೆ, ಕ್ರೌರ್ಯ, ಆತ್ಮಹತ್ಯೆಗೆ ಬಲಿಯಾಗುತ್ತಿದೆ. ದೇವತಾ ಸ್ಥಾನದಲ್ಲಿ ಆರಾಧಿಸಲ್ಪಡುವ ಹೆಣ್ಣು ಮಕ್ಕಳು ಸಮಾನತೆಯ ಭ್ರಾಂತಿಗೆ ಕಲೆಯ ಹೆಸರಿನಲ್ಲಿ ಮೈಯ ಸೊಬಗನ್ನು ಮಾರುವ ವಿಪರೀತಕ್ಕೆ ಬಲಿಯಾಗಿದ್ದಾರೆ. ಎಲ್ಲ ಕಡೆಯೂ ಪೂರ್ಣ ಹಾಳಾಗುವುದರೊಳಗೆ ಸಂಸ್ಕೃತಿಯ ರಕ್ಷಣೆಗೆ ಮನ ಮಾಡಿದರೆ ಅದು ನಮ್ಮ ರಕ್ಷಣೆಗೆ ಮುಂದಾಗುತ್ತದೆ.



# ತನ್ನುದ್ಧಾರಕ್ಕೆ ತಾನೆ ಹೊಣೆ

ಎಂ. ಮಾಧವಪ್ಪೈ, " ಶ್ರೀನಿವಾಸ ", ಡಿ.ವಿ.ಎಸ್. ಹೈಸ್ಕೂಲ್ ಪಕ್ಕ, ವಿನೋಬನಗರ, ಶಿವಮೊಗ್ಗ -1

ಬೌದ್ಧ ಧರ್ಮ ಗ್ರಂಥವಾದ "ದಮ್ಮಪದ"ದಲ್ಲಿ ಬುದ್ಧನ ಶಾಸನವೇನು ಎಂಬುದನ್ನು ಹೀಗೆ ತಿಳಿಸಲಾಗಿದೆ.

ಸಬ್ಬಪಾಪಸ್ಯ ಅಕರಣಂ ಕುಸಲಸ್ಯ ಉಪಸಂಪದಾ
ಸಚಿತ್ತ ಪರಿಯೋದಪನಂ ಏತಂ ಬುದ್ಧಾನುಶಾಸನಂ||

ಎಲ್ಲ ಪಾಪಗಳ ಅಕರಣ (ಮಾಡದಿರುವಿಕೆ) ಎಲ್ಲ ಕುಶಲಗಳ ಸಂಪಾದನ ಮತ್ತು ಸ್ವಚಿತ್ತದ ಸಂಶೋಧನೆ ಇದೇ ಬುದ್ಧನ ಶಾಸನವಾಗಿದೆ ಎಂದು. ಎಲ್ಲ ಅಕುಶಲ ಅಂದರೆ ಪಾಪಕಾರಣವಾದ ಕರ್ಮಪಥವನ್ನು ಪೂರ್ತಿಯಾಗಿ ಬಿಟ್ಟುಬಿಡಬೇಕು ಮತ್ತು ಕುಶಲ ಕರ್ಮಪಂಥವನ್ನು ಸದೋದಿತರಾಗಿ ಆಚರಿಸಿಕೊಂಡು ಇರಬೇಕು. ಆದರೆ ಮನಸ್ಸನ್ನು ಅದರಲ್ಲಿ ಆಸಕ್ತವಾಗಿಸಬಾರದು ಎಂದು ತಿಳಿಸುವ ಈ ಶಾಸನದಲ್ಲಿ ಮಾನವನು ಪುಣ್ಯ ಪಥದಲ್ಲಿ ಸಾಗಲು ಏನು ಮಾಡಬೇಕೆಂಬುದನ್ನು ಬೋಧಿಸಲಾಗಿದೆ.

ಮನುಷ್ಯ ಸಾಮಾನ್ಯವಾಗಿ ತನ್ನದೇಹ, ಮಾತು ಮತ್ತು ಮನಸ್ಸು ಇವುಗಳಿಂದ ಒಳಿತೊ-ಕೆಡುಕೊ ಕಾರ್ಯಗಳನ್ನು ಮಾಡುತ್ತಿರುತ್ತಾನೆ. ಹೀಗಾಗಿ ಕಾಯಾ, ವಾಚಾ, ಮನಸಾ ಆಗುವ ಕಾರ್ಯಗಳು ಕುಶಲವೂ ಅಕುಶಲವೂ ಆಗುವ ಸಾಧ್ಯತೆ ಇದೆ. ಯಾವುದು ಪುಣ್ಯದಾಯಕವೂ ಕ್ಷೇಮಕರವೂ ಆಗಿರುವುದೊ ಆ ಸುಕೃತವಾಗಿರುವವು ಕುಶಲಕಾರ್ಯಗಳು, ಇದಕ್ಕೆ ವಿರುದ್ಧವಾದವುಗಳು, ಅಕುಶಲ ಕರ್ಮಗಳು. ಯಾವುದೆಂದರೆ ಪ್ರಾಣಾಘಾತ, ಅದತ್ತಾದಾನ ಅಂದರೆ ಕಳವು ಮತ್ತು ಕಾಮಮಿಥ್ಯಾಚಾರ ಎಂಬ ಮೂರು ಕಾಯಿಕ ಪಾಪಗಳು, ಅಸತ್ಯ, ಚಾಡಿ, ಅಪಶಬ್ದ ಅಂದರೆ ಬೈಗಳು ಮತ್ತು ನಿರರ್ಥಕ ನುಡಿಗಳೆಂಬ ನಾಲ್ಕು ವಾಚಸಿಕ ಪಾಪಕರ್ಮಗಳು ಹಾಗು ಪರದ್ರವ್ಯಲೋಭ, ಅನ್ಯರ ನಾಶದ ಇಚ್ಛೆ ಮತ್ತು ನಾಸ್ತಿಕ ದೃಷ್ಟಿ ಎಂಬೀ ಮೂರು ಮಾನಸಿಕ ಪಾಪಕರ್ಮಗಳು ಹೀಗೆ ಇವು ಹತ್ತು ಅಕುಶಲಕರ್ಮಗಳು. ಇವು ಮನುಷ್ಯನನ್ನು ಸನ್ಮಾರ್ಗದಿಂದ ದೂರಸರಿಸುವುವು, ಅಧಃಪತನಕ್ಕೆ ಒಯ್ಯುವುವು. ಆದ್ದರಿಂದ ಇವುಗಳಿಂದ ಎಂದೆಂದೂ ಮುಕ್ತನಾಗಬೇಕು. ನಿವೃತ್ತಗೊಳ್ಳಲು ಇರುವ ಪಥವೇ ಕುಶಲಪಥ. ಇವು ಕೂಡಾ ಹತ್ತು. ಇವು ಬೋಧಿಸಿದ ಅಷ್ಟಾಂಗ ಮಾರ್ಗದಲ್ಲೇ ಸಮಾವೇಶವಾಗುವುದು. ಮೂರು ತರದ ಕುಶಲ ಕಾಯಕ ಕರ್ಮವೆಂದರೆ ಕೊಲೆ,

ಕಳವು, ವ್ಯಭಿಚಾರಾದಿ ಮಾಡದಿರುವ ಸಮ್ಯಕ್ ಕರ್ಮ; ಮೂರು ತೆರದ ಕುಶಲ ವಾಚಸಿಕ ಕರ್ಮ ಎಂದರ ನಾಲ್ಕು ಸತ್ಯಗಳನ್ನು ಅರಿತು ಅಸತ್ಯ, ಚಾಡಿ, ಬೈಗಳು, ನಿರರ್ಥಕಗಳನ್ನು ತ್ಯಜಿಸುವ ಸಮ್ಯಕ್ ದೃಷ್ಟಿ ಮತ್ತು ಸಮ್ಯಕ್ ಸಂಕಲ್ಪ; ಇನ್ನುಳಿದ ಮಾನಸಿಕ ಕುಶಲ ಕರ್ಮವೆಂದರೆ ಪರದ್ರವ್ಯಲೋಭ, ಅನ್ಯರ ನಾಶದ ದೃಷ್ಟಿ, ನಾಸ್ತಿಕ ಭಾವನೆಯನ್ನು ತ್ಯಜಿಸಿದ ಆರ್ಯ ಅಷ್ಟಾಂಗಿಕ ಮಾರ್ಗದ ನಾಲ್ಕು ಅಂಗಗಳಾದ ಸಮ್ಯಕ್ ಆಜೀವ, ಸಮ್ಯಕ್ ವ್ಯಾಯಾಮ, ಸಮ್ಯಕ್ ಸ್ಥಿತಿ ಮತ್ತು ಸಮ್ಯಕ್ ಸಮಾಧಿ. ಈ ಹೇಳಿದ ಅಕುಶಲ ಹಾಗು ಕುಶಲ ಕರ್ಮಗಳಲ್ಲಿ ಸದಾ ಕುಶಲ ಕರ್ಮಗಳನ್ನು ಸಂಪಾದಿಸಿಕೊಳ್ಳಬೇಕಾದುದೇ ಮಾನವನ ಧರ್ಮ. ಇದನ್ನು ತನ್ನ ಬದುಕಿನಲ್ಲಿ ಅಳವಡಿಸಿಕೊಂಡರೆ ಆತನಿಗೆ ಸುಖಕರವೂ ಹಿತಕರವೂ ಆಗುವುದು.

ಆದರೆ ಬುದ್ಧ ಇಲ್ಲಿ ಒಂದು ಎಚ್ಚರಿಕೆ ಕೊಟ್ಟಿದುಂಟು. ಅದೇನೆಂದರೆ ಕೇವಲ ಕುಶಲವನ್ನು ಮಾಡುತ್ತ ಹೋಗಿ ಅದರಲ್ಲಿಯೇ ಆಸಕ್ತನಾದರೆ ಆ ಕಾರಣದಿಂದ ಅಕುಶಲ ಉತ್ಪನ್ನವಾಗುವ ಸಂಭವವಿದೆ. ಇದರಿಂದಾಗಿ ಕುಶಲ ಮನೋವಿಚಾರವು ಅಕುಶಲಕ್ಕೆ ಆಲಂಬನ ಪ್ರತ್ಯಯದಿಂದ ಪ್ರತ್ಯಕ್ಷವಾಗುವುದು. ಹೇಗೆಂದರೆ ಒಬ್ಬನು ದಾನವನ್ನು ಕೊಡುತ್ತಾನೆ, ಶೀಲವನ್ನು ಕಾಪಾಡಿಕೊಳ್ಳುತ್ತಾನೆ, ಉಪೋಸಥ ಕರ್ಮವನ್ನು ಮಾಡುತ್ತಾನೆ. ಮತ್ತೆ ಅದರ ಆಸ್ವಾದವನ್ನು ಪಡೆಯುತ್ತಾನೆ, ಅಭಿನಂದನ ಹೊಂದುತ್ತಾನೆ. ಇದರಿಂದಾಗಿ ಅವನಲ್ಲಿ ಲೋಭ ಹುಟ್ಟುವುದು. ದೃಷ್ಟಿ ಉತ್ಪನ್ನವಾಗುವುದು, ಸಂಶಯ ಹುಟ್ಟುವುದು, ಭ್ರಾಂತತೆ ಹುಟ್ಟುವುದು. ದೌರ್ಮನ್ಯಸ ಹುಟ್ಟುವುದು ಈ ರೀತಿ ಕುಶಲ ಮನೋ ವೃತ್ತಿಯು ಅಕುಶಲಕ್ಕೆ ಕಾರಣೀಭೂತವಾಗುವುದರಿಂದ ಕುಶಲಕರ್ಮಗಳ ವಿಚಾರದಲ್ಲಿ ಆಸಕ್ತಿಯನ್ನು ಇಡಕೂಡದು. ನಿರಪೇಕ್ಷ ಬುದ್ಧಿಯಿಂದ ಕುಶಲಕರ್ಮವನ್ನು ಮಾಡುತ್ತ ಇದ್ದು ಕೊಳ್ಳಬೇಕು ಎಂಬುದನ್ನೇ ಈ ಮೊದಲೇ ಹೇಳಿದ ದಮ್ಮಪದದೊಳಗಿನ ಗಾದೆಯು ಸಂಕ್ಷೇಪವಾಗಿ ತೋರಿಸಿದೆ.

ಬುದ್ಧ ನೀಡಿದ ಈ ಎಚ್ಚರಿಕೆಯನ್ನು ನಾವು ಅರ್ಥೈಸಿಕೊಳ್ಳಬೇಕು. ಅತಿಯಾದ ಉತ್ತಮ ವರ್ತನೆಯು ಮಾನವನಲ್ಲಿ ನಾನೇ ಅತ್ಯುತ್ತಮನು ಎಂಬ ಮನೋಭಾವವನ್ನು ಜಾಗ್ರತಗೊಳಿಸಿ ಅವನನ್ನು ಅಹಂಕಾರಿಯನ್ನಾಗಿ ಪರಿವರ್ತಿಸುವುದಕ್ಕೆ ಕಾರಣವಾಗುವುದನ್ನು ನಾವು ಲೋಕದಲ್ಲಿ ಕಾಣಬಹುದಾಗಿದೆ. ನಮ್ಮಲ್ಲಿ ಉತ್ತಮ ವರ್ತನೆ



ಇರಬೇಕು. ನಮ್ಮ ಕಾಯಕ, ವಾಚಸಿಕ, ಮಾನಸಿಕ, ಯಾವುದೇ ಉತ್ತಮ ಕರ್ಮಗಳು ಸ್ವಾಭಾವಿಕವಾಗಿಯೇ ಮೂಡಿ ಬರಬೇಕಲ್ಲದೆ ಆ ಉತ್ತಮ ಕರ್ಮಗಳ ಬಗ್ಗೆ ಯಾವುದೇ ಅಪೇಕ್ಷೆ ಇರಬಾರದು. ಅಂದರೆ ನಾನು ಉತ್ತಮ ಕರ್ಮಗಳನ್ನು ಮಾಡುತ್ತಿರುವುದರಿಂದ ನನಗೆ ಎಲ್ಲರೂ ಮನ್ನಣೆ ನೀಡಬೇಕು ಎಂಬ ಭಾವನೆಯಿಂದ ಕೂಡಿರಬಾರದು. ಎರಡನೆಯದಾಗಿ ನಿರಪೇಕ್ಷ ಬುದ್ಧಿಯಿಂದ ಮಾಡಿದ ಕರ್ಮಗಳು ಸಹಜವಾಗಿಯೇ ಲೌಕಿಕರ ಮೇಲೆ ಪ್ರಭಾವ ಬಿದ್ದು ಅದನ್ನು ಮಾಡಿದವನು ಅವರಿಂದ ಗೌರವಕ್ಕೆ ಪಾತ್ರನಾಗುತ್ತಾನೆ. ಎಲ್ಲರಿಂದ ಗೌರವಕ್ಕೆ ಪಾತ್ರನಾದಾಗಲೂ ವ್ಯಕ್ತಿಯಲ್ಲಿ ಅಹಂಭಾವ ಮೂಡುವ ಸಂಭವವಿದೆ. ಇದನ್ನು ಬಸವಣ್ಣನವರು ಸುಂದರವಾಗಿ ಹೇಳಿದ್ದಾರೆ. ಅವರಿವರೆನ್ನದೆ ಚರಣಕ್ಕೆರಗಲು ಅಯ್ಯತನವೇರಿ ಬಿಬ್ಬನೆ ಬಿರಿವೆ ನಾನು, ಕೆಚ್ಚು ಬೆಳೆಯಿತಯ್ಯ" ಹೀಗಾಗಿ ಕುಶಲಕರ್ಮಗಳನ್ನು ನಿರಪೇಕ್ಷ ಭಾವನೆಯಿಂದ ಮಾಡಬೇಕೆಂದು ಬುದ್ಧನು ಹೇಳಿರುವ ಮಾತಿನ ಔಚಿತ್ಯವನ್ನು ಅರ್ಥಮಾಡಿಕೊಳ್ಳಬಹುದಾಗಿದೆ. ಇದೆಲ್ಲವು ವ್ಯಕ್ತಿಯ ಉದ್ಧಾರಕ್ಕಾಗಿ ಸ್ವೋನ್ನತಿಗಾಗಿ ಎಂಬುದನ್ನು.

ಬಹುಜನಹಿತಾಯ ಬಹುಜನ ಸುಖಾಯ ಬೋಧಿಸಿದ ಬುದ್ಧನು ಪ್ರತಿಯೊಬ್ಬನೂ ಉದ್ಧಾರನಾಗಬೇಕೆಂಬ ಉದ್ದೇಶವನ್ನು ಇಟ್ಟುಕೊಂಡಿದ್ದನು. ಆದರೆ ವ್ಯಕ್ತಿಯ ಉದ್ಧಾರ ಆತನನ್ನೇ ಅವಲಂಬಿಸಿಸಿಯೇ ಹೊರತು ಯಾರೇ ಯಾರನ್ನು ಉದ್ಧಾರ ಮಾಡುವುದಕ್ಕಾಗ ುವುದಿಲ್ಲ ಎಂಬುದನ್ನು ಮನಗಾಣಿಸಿ ಕೊಟ್ಟಿದ್ದಾನೆ. ಅತ್ತಾಹಿ ಅತನೋಗತಿ ನಾಥೋ । ಅತ್ತಾಹಿ ಅತ್ತಸೋ ಗತಿ । ತಸ್ಮಾಸಂಚಮಯತ್ತಾಣಂ । ಅಸ್ಸಂಭದ್ಧಂವ ವಾಣಿಜೋ। ಎಂದರೆ ನಾವೇ ನಮ್ಮ ಒಡೆಯರು. ನಮ್ಮ ಆತ್ಮದ ಹೊರತು ನಮ್ಮನ್ನು ಕಡೆ ಹಾಯಿಸುವವರು ಯಾರು ?ಆದುದರಿಂದವ್ಯಾಪಾರಸ್ಥನು ತನ್ನ ಉತ್ತಮ ಕುದುರೆಯನ್ನು ಬಿಗಿ ಹಿಡಿಯುವಂತೆ ನಮ್ಮನ್ನು ನಾವೇ ಚೆನ್ನಾಗಿ ಬಿಗಿ ಹಿಡಿಯಬೇಕು. ಎಂಬ ನುಡಿ ಬೋಧಪ್ರಧದಾಗಿದೆಯಲ್ಲವೆ ?

ಕೃಪೆ : ಆಕಾಶವಾಣಿ, ಭದ್ರಾವತಿ



# ತಲೆತಗ್ಗಿಸ ಬೇಡಿ

❁ ಬಿ. ಸುಬ್ರಾಯ ಅಡಿಗ, ನಿವೃತ್ತ ಶಿಕ್ಷಕರು, ಸಂಡೂರು, ಬಳ್ಳಾರಿ-ಜಿಲ್ಲೆ

ಶರೀರವನ್ನು ಉತ್ತಮ ರೀತಿಯಲ್ಲಿಡಬೇಕೆಂಬುದನ್ನು ಎಲ್ಲರೂ ಬಲ್ಲರು. ಸೆಟೆದು ನಡೆಯಬಲ್ಲ ಶಕ್ತಿ ಮನುಷ್ಯರಲ್ಲಿ ಮಾತ್ರವೆ ಇದೇ. ಮತ್ತು ಮನುಷ್ಯ ಮಾತ್ರ ಮುದಿತನ ಬಂದಾಗ ಬೆನ್ನುಬಾಗಿಸಿ ನಡೆಯುವ ದುಃಸ್ಥಿತಿಗೀಡಾಗುತ್ತಾನೆ. ತಗ್ಗಿದ ಕೊರಳು ಮುದಿತನದ ಕುರುಹು. ವೃದ್ಧಾಪ್ಯದಲ್ಲಿ ಶಾರೀರಿಕ ಶಿಥಿಲತೆಯಿಂದಾಗಿಯೇ ಈ ಸ್ಥಿತಿ ಒದಗುತ್ತದೆಯೆಂದಲ್ಲ. ಮಾನಸಿಕ ದೃಢತೆಯ ಅಭಾವವು ಇದಕ್ಕೆ ವಿಶೇಷ ಕಾರಣವಾಗಿದೆ. ತಗ್ಗಿದ ಕೊರಳು ನಿಮ್ಮನ್ನು ನಿರಾಶೆಗೊಳಿಸುತ್ತದೆ; ಮತ್ತು ದೈಹಿಕ ಹ್ರಾಸಕ್ಕೆ ಕಾರಣವಾಗುತ್ತದೆ.

ಆದ್ದರಿಂದ ಬೆನ್ನೆಲುಬನ್ನು ನೇರವಾಗಿ ಸೆಟೆದಿರಿಸುವ ಅಗತ್ಯದ ಕುರಿತು ಲಕ್ಷ್ಯವೀಯುವುದು ಅತಿಮಹತ್ವಪೂರ್ಣ. ಜೀವನದಪ್ರತಿಯೊಂದು ಕ್ಷಣವೂ ಉತ್ಸಾಹಪೂರ್ಣವಾಗಿ ಕಳೆಯುವಂತೆ ನೋಡಿಕೊಳ್ಳಬೇಕು. ಆರೀತಿ ಆಗಬೇಕಾದರೆ ಬೆನ್ನೆಲ ಬನ್ನು ನೇರಾಗಿರಿಸುವುದಕ್ಕಾಗಿ ನಾವು ಪ್ರಯತ್ನಿಸಬೇಕು. ಆಗ ನಮಗೆ ಜೀವನದಲ್ಲಿ ಸ್ಫೂರ್ತಿಸಾಹಸಗಳು ತಾನಾಗಿಯೇ ಒದಗುತ್ತವೆ. ಬೆನ್ನೆಲುಬಿನ ಈಸ್ಥಿತಿ ಸಹಜವಾದುದೇ. ಆಬಗ್ಗೆ ನಾವೇನೂ ವಿಶೇಷಶ್ರಮ ವಹಿಸಬೇಕಾಗಿಲ್ಲ. ಯಾವಾಗಲೂ ಬೆನ್ನೆಲುಬು ಬಾಗಿಹೋಗದಂತೆ ನೆನಪಿಟ್ಟುಕೊಂಡರೆ ಸಾಕು. ಬರ ಬರುತ್ತ ನಮಗದು ಸ್ವಾಭಾವಿಕವಾಗುತ್ತದೆ.

ಸೆಟೆದು ನಡೆಯುವುದು ಶಾರೀರಿಕ ಹಾಗೂ ಮಾನಸಿಕ ಆರೋಗ್ಯಕ್ಕೆ ಹಿತಕರವೆಂದು ಇಲ್ಲಿ ಹೇಳಬಯಸುತ್ತೇನೆ ಈ ಸ್ಥಿತಿಯಿಂದ ಮನಸ್ಸಿನ ಮೇಲೆ ಅಸಾಧಾರಣ ಪ್ರಭಾವ ವುಂಟಾಗುತ್ತದೆ. ನಮ್ಮ ಆತ್ಮ ವಿಶ್ವಾಸ ಹೆಚ್ಚಿ ಪೌರುಷ ಜಾಗ್ರತವಾಗುತ್ತದೆ. ಮತ್ತು ನಮ್ಮ ವಿಚಾರಗಳು ದೃಢವಾಗುತ್ತವೆ. ಮೆದುಳನ್ನು ಅನಾವಶ್ಯಕ ಜಂಜಡಗಳಿಂದ ತಪ್ಪಿಸಲು ಇದು ರಾಮಬಾಣವಾಗಿದೆ ತಗ್ಗಿದಕೊರಳು ಭಯ ಹಾಗೂ ಕಳವಳದ ಗುರುತು. ಸಂಕೋಚ, ಲಜ್ಜೆ, ಕಿಂಕರ್ತವ್ಯ ವಿಮೂಡತೆ ಹಾಗೂ ಅವಸಾದದಿಂದ ನಮ್ಮ ಕೊರಳು ಕುಗ್ಗಿ ಹೋಗುತ್ತದೆ.; ಮತ್ತು ಬೆನ್ನೆಲುಬು ಸೆಟೆದು ನಿಲ್ಲಲಾರದು. ವಿಶ್ವಾಸ/ಸಾಹಸಪೂರ್ವಕವಾಗಿ ನಾವು ಮಾಡುವ ಕಾರ್ಯದಲ್ಲಿ ತಲೆ ತಗ್ಗಿಸುವ ಪ್ರಮೇಯ ಬರುವುದಿಲ್ಲ. ಆ ಕೆಲಸದ ವೇಳೆ ಠೀವಿಯಿಂದ ಕೊರಳೆತ್ತಿ ನಿಲ್ಲುತ್ತೇವೆ. ಹೀಗೆ ಕೊರಳು ಹಾಗೂ ಬೆನ್ನೆಲುಬು ಸೆಟೆದಿರುವುದರಿಂದ ಆತ್ಮವಿಶ್ವಾಸ ಹಾಗೂ ಸಾಹಸದ ಉತ್ಪತಿ ಉಂಟಾಗುವುದು. ಇದಕ್ಕೆ ಬದಲು, ನಿರ್ಭಯ ಹಾಗೂ ಆತ್ಮವಿಶ್ವಾಸಿಯೊಬ್ಬನು ನಿರಾಶೆಯಿಂದ ಬರುವ ಅನುಭವಗಳನ್ನು ಸ್ವೀಕರಿಸಿದರೆ ಅರ್ಥಾತ್ ತಲೆ ತಗ್ಗಿಸಿದರೆ, ಅಂತಹನು ಶೀಘ್ರದಲ್ಲೇ ಆತ್ಮ ವಿಶ್ವಾಸ ಕಳೆದುಕೊಂಡು ನಿರಾಶಾಗತನಾದಲ್ಲಿ ಬೀಳುವುದು ಖಂಡಿತ. ನಮ್ಮ ದೇಹದ ಸ್ಥಿತಿ ನಮ್ಮ ಮನಸ್ಸು ಹಾಗೂ ಭಾವನೆಗಳ ಮೇಲೆ ವಿಶೇಷ ಪ್ರಭಾವ ಬೀರುತ್ತದೆಂದು ಇದರಿಂದ ವ್ಯಕ್ತವಾಗುತ್ತದೆ. ಈ ಮನೋವೈಜ್ಞಾನಿಕ ತಥ್ಯದ ಮೇಲೆ ವಿಜ್ಞಾನಿಗಳು ಇನ್ನೂ ಪೂರ್ತಿಯಾಗಿ ವಿಚಾರ ಮಾಡಿಲ್ಲ. ಆದರೆ ನೀವೆಂದಾದರೂ



ನಿರಾಶೆಗೆ ಗುರಿಯಾಗುವಂತಹ ಪರಿಸ್ಥಿತಿ ಒದಗಿದರೂ ತಲೆ ತಗ್ಗಿಸಬೇಡಿ....ಆಗ ಬಂದ ತೊಡಕು ತಾನಾಗಿಯೇ ದೂರಾಗುವುದು. ಇದನ್ನು ನೀವೊಮ್ಮೆ ಪರೀಕ್ಷಿಸಿ ನೋಡಿರಿ.

ಬೆನ್ನೆಲುಬನ್ನು ನೇರಾಗಿರಿಸುವುದರಿಂದ ನಮ್ಮ ಆರೋಗ್ಯವೂ ಸುಧಾರಿಸುವುದು. ಆಗ ದೇಹದ ಮುಖ್ಯ ಮುಖ್ಯ ಅವಯವಗಳು ಯಥಾಸ್ಥಾನದಲ್ಲಿರುವುವು. ಹೃದಯ ಹಾಗೂ ಶ್ವಾಸಕೋಶಗಳು ವಿಸ್ತೃತವಾಗಿಯೇ ಇರಲು ಅನುವು ದೊರೆಯುವುದು. ದೇಹವು ಮುಂದಕ್ಕೆ ಬಾಗಿದ್ದರೆ ಬೆನ್ನೆಲುಬು ಓರೆಯಾಗಿದ್ದರೆ ಉದರ, ಯಕೃತ್, ಕರುಳು ಮೊದಲಾದ ಅವಯವಗಳ ಚಟುವಟಿಕೆ ಕಡಿಮೆಯಾಗಿ ಅವು ತಮ್ಮ ಕೆಲಸವನ್ನು ಸರಿಯಾಗಿ ಮಾಡಲಾರವು. ದೇಹವನ್ನು ನೇರಾಗಿರಿಸುವುದರಿಂದ ಈ ಅವಯವಗಳು ಯಥಾಸ್ಥಾನದಲ್ಲಿದ್ದು ತಮ್ಮ ಚಟುವಟಿಕೆಗಳನ್ನು ತುಂಬಾ ಉತ್ಸಾಹದಿಂದ ನೆರವೇರಿಸುತ್ತವೆ.

ಬೆಳಿಗ್ಗೆ ಎದ್ದಾಗ ನೀವು ನಿಮ್ಮ ಟೊಂಕವನ್ನು ನೇರಾಗಿರಿಸಿರಿ. ಒಟ್ಟಿಗೆ ಬೆನ್ನೆಲುಬೂ ಸೆಟೆದು ನಿಲ್ಲುತ್ತದೆ. ನೀವು ನಡೆಯುವಾಗ, ಕುಳಿತುಕೊಳ್ಳುವಾಗ ಹೀಗೆ ಎಲ್ಲ ವೇಳೆಯಲ್ಲೂ ಸೆಟೆದಿರುವುದನ್ನು ಮರೆಯಬೇಡಿ.

ಬೆನ್ನೆಲುಬನ್ನು ನೇರಾಗಿಡುವುದೆಂದರೆ ಯೌವನ, ಆರೋಗ್ಯ, ಸ್ಫೂರ್ತಿ, ಉತ್ಸಾಹ ಹಾಗೂ ಸಾಹಸವನ್ನು ಪಡೆದಿರುವುದೆಂದರ್ಥ. ಮತ್ತು ನಿಶ್ಶಕ್ತಿ, ಕಳವಳ, ನಿರಾಶೆ, ಅಂಜಿಕೆ-ಇವುಗಳನ್ನು ಓಡಿಸುವುದು ಎಂದರ್ಥ.

ಜೀವನ ಗುಲಾಬಿ ಹೂಗಳ ಹಾಸಿಗೆಯಲ್ಲ. ಕ್ಷಣ ಕ್ಷಣವೂ ಹಲವಾರು ದುಃಖ ಚಿಂತೆಗಳನ್ನು ಅನುಭವಿಸಬೇಕಾಗುತ್ತದೆ. ಆ ದುಃಖ ಚಿಂತೆಗಳು ನಮ್ಮನ್ನು ನಿರಾಶರನ್ನಾಗಿ ಮಾಡಿಬಿಡಬಹುದು. ಆಗ ನಾವು ತಲೆತಗ್ಗಿಸಿ ಕಾರ್ಯವಿಮುಖರಾಗುತ್ತೇವೆ. ಹಾಗಾಗದಂತೆ ನಾವು ಯಾವಾಗಲೂ ಕೊರಳನ್ನು ಎತ್ತಿ ನಡೆಯಬೇಕು. ನಿರಾಶಾದಾಯಕ ಮನೋಭಾವಗಳನ್ನು ಹೊಡೆದೋಡಿಸಿ, ಉತ್ಸಾಹವಂತರಾಗಬೇಕಾದರೆ ಕೊರಳೆತ್ತಿ ನಡೆಯುವುದೇ ಉತ್ತಮ ಉಪಾಯ. ನಿಮ್ಮನ್ನು ಕಂಗೆಡಿಸಲು ಪ್ರಯತ್ನಿಸುವ ಮನೋಭಾವಗಳನ್ನು ಓಡಿಸುವುದಕ್ಕಾಗಿ ನಿಮ್ಮೆಲ್ಲ ಶಾರೀರಿಕ ಹಾಗೂ ಮಾನಸಿಕ ಶಕ್ತಿಗಳನ್ನುಪಯೋಗಿಸಿರಿ. ನಿರಾಶೆ ಹಾಗೂ ಪರಾಜಯದ ವೇಳೆ ನೀವು ಧೈರ್ಯವಾಗಿ ಕೊರಳೆತ್ತಿ, ಬೆನ್ನೆಲುಬನ್ನು ನೇರಗಿರಿಸಿರಿ. ತಲೆತಗ್ಗಿಸಬೇಡಿರಿ .... .... ಆಗ ಎಲ್ಲ ಸಮಸ್ಯೆಗಳನ್ನು ಎದುರಿಸುವ ಸಾಮರ್ಥ್ಯ ನಿಮಗುಂಟಾಗುವುದು.

ಕರ್ತವ್ಯ ಪಾಲನೆಯ ವೇಳೆ ಪ್ರಮಾದಗಳನ್ನೆಂದೂ ಎಸಗಬೇಡಿ. ಗುರಿ ಮುಟ್ಟುವವರೆಗೆ ನೀವು ಚಂಚಲರಾಗ ಬಾರದು. ಎಂತಹ ಎಡರು-ತೊಡರು ಬಂದರೂ ನೀವು ಕಂಗೆಡಬಾರದು. ಮನ ಬಂದಂತೆ ಬದುಕುವುದು ನಮ್ಮ ಗುರಿಯಲ್ಲ, ನಾವು ಬಾಳಿನಲ್ಲಿ ಕೆಲನಿಯಮಗಳನ್ನು ಪಾಲಿಸಬೇಕು. ಜೀವನವನ್ನು ಮಧುರ ಗೊಳಿಸುವ ಉತ್ತಮ ಸಂದರ್ಭಗಳು ನಮಗೆ ಆಗಾಗ್ಗೆ ಬರುತ್ತವೆ. ಆಗ ಆಲಸ್ಯವಶರಾಗಿಯೋ ಅಜ್ಞಾನದಿಂದಾಗಿಯೋ ಬಾಗಿಲಿಗೆ ಬಂದ ಸಂಪತ್ತನ್ನು ನಿರಾಕರಿಸಿ ಪಶ್ಚಾತ್ತಾಪ ಪಡಬೇಡಿ. ಯಾವಾಗಲೂ ಜಾಗ್ರತರಾಗಿರಿ. ಎದೆ ನೀಡಿ ನಡೆಯಿರಿ .... .... ನಿಮ್ಮ ತಲೆಯೆಂದೂ ತಗ್ಗದಿರಲಿ .... .... ಆಗಲೇ ನಿಮ್ಮ ಬದುಕು ಸಾರ್ಥಕವಾದೀತು.

# ಮನುಷ್ಯ ಚಾರಿತ್ರ್ಯಹೀನನಾಗುವುದು ಹೇಗೆ?

❁ ಭಾವಜ್ಞ ಜಮಖಂಡಿ, ಅಧ್ಯಕ್ಷರು, ಕ.ಸಾ.ಪ, ಜಮಖಂಡಿ, ಬಿಜಾಪುರ ಜಿಲ್ಲೆ.

**ಕಾಮ ಪ್ರಕೃತಿದತ್ತ ಕ್ರಿಯೆ :–** ಇದು ಜೀವ ಸಂಕುಲದ ಅವಿಭಾಜ್ಯ ಕ್ರಿಯೆಯೂ ಕೂಡ. ಪ್ರಾಣಿಕುಲದ ಕಾಮಕ್ರಿಯೆ ಬದಿಗಿರಿಸಿ ಮನುಷ್ಯ ಕುಲದ ಕಾಮಕ್ರಿಯೆ ಕುರಿತು ಚಿಂತನೆ ಮಾಡುವುದು.

ಜಗತ್ತಿನ ಅನೇಕ ರಾಷ್ಟ್ರಗಳಲ್ಲಿ ಕಾಮದ ಸ್ಥಾನಮಾನಗಳು ವಿಭಿನ್ನವಾಗಿವೆ. ಹಾಗೆಯೇ ಭಾರತದಲ್ಲಿಯೂ ಕೂಡ.

ಭಾರತವು ಮುಖ್ಯವಾಗಿ ಭಾವನಾಪ್ರಧಾನವಾದ ದೇಶ. ಈ ದೇಶದಲ್ಲಿ ಕಾಮಕ್ಕೆ ಮಾನಸಿಕವಾದ ವೈಶಿಷ್ಟ್ಯವಿದೆ. ಭಾರತೀಯ ಸಾಹಿತ್ಯವೂ ಕೂಡ ಕಾಮಕ್ಕೆ ಹೆಚ್ಚು ಒತ್ತು ಕೊಟ್ಟುದಾಗಿದೆ. ಕಾಮಕ್ಕೆ ಹೆಚ್ಚು ಒತ್ತು ಕೊಡುವ ದೇಶವು ವೈಜ್ಞಾನಿಕವಾಗಿ ಮುಂದುವರೆಯುವುದು ತೀರ ಮಂದಗತಿಯಲ್ಲಿ.

ಅಂತೆಯೇ ಭಾರತವನ್ನು ಬೇರೆ ದೇಶಗಳಿಗೆ ಹೋಲಿಸಿದಾಗ, ವೈಜ್ಞಾನಿಕ ನೆಲೆಗಾಗಿ ತಡಕಾಡಬೇಕಾಗುವುದು. ಹೀಗೆಂದ ಮಾತ್ರಕ್ಕೆ ವೈಜ್ಞಾನಿಕತೆಯತ್ತ ನಿಃಶೂನ್ಯಭಾವವೆಂದೇನಲ್ಲ. ವೈಜ್ಞಾನಿಕ ಜಿಜ್ಞಾಸೆಯು ಇಲ್ಲವೆಂದು ಭಾವಿಸಲಾಗದು. ಭಾರತದಲ್ಲಿ ಭಾವನಾತ್ಮಕ, ಧಾರ್ಮಿಕ, ನೈತಿಕ ಸ್ಥಾನಮಾನಕ್ಕೆ ಸಂವಿಧಾನಾತ್ಮಕ ಮೌಲ್ಯವಿದೆ. ಆದ್ಯತೆಯಿದೆ.

ಕಾಮದ ವಿಷಯದಲ್ಲಿ ಮಾನಸಿಕವಾದ ತುಡಿತಕ್ಕೆ ಮುಕ್ತ ಅವಕಾಶ ಇರಲಾರದು. ಈ ಬಂಧನ ಇರುವುದಾದರೆ ಮನುಷ್ಯ ಕಾಮದಿಂದ ದೂರವಾಗಿರಲು ಸಾಧ್ಯವಿಲ್ಲ. ಇದು ಪ್ರಕೃತಿದತ್ತವಾದ ಕ್ರಿಯೆಯಾಗಿರುವುದರಿಂದ ಇದಕ್ಕೆ ತೀರ ಸಂಕುಚಿತ ಮನೋಭಾವದ ಬಂಧನವೂ ಔಚಿತ್ಯವೆನಿಸಿಸದು.

ಕಾಮ ಜಾತ್ಯತೀತ ಕ್ರಿಯೆ. ಭಾರತದಲ್ಲಿ ಈ ಜಾತ್ಯತೀತ ಕ್ರಿಯೆಯಿಂದ ಕಾಮ ದೂರ ಇರುವುದಾಗಿದೆ. ಇದಕ್ಕೆ ಜಾತೀಯ ಪರಂಪರೆ (ಪಾಚೀನಕಾಲದಿಂದ) ಇರುವುದಾದರೂ ಇತ್ತಿತ್ತಲಾಗಿ ಸಾಮೂಹಿಕ ಮದುವೆಗಳ ಮೂಲಕ ಜಾತ್ಯತೀತ ಹಾಗು ವಿಧವಾ ವಿವಾಹ ನಡೆದು ಭಾರತ ಜಾತ್ಯತೀತ ಕಾಮದ ಬದುಕನ್ನು ಸ್ವಾಗತಿಸುವಂತಾಗಿದೆ. ಜಾತ್ಯತೀತ ರೂಪ ರೂಢಿಯಲ್ಲಿ ಬರುವುದು ಒಂದು ಪ್ರಗತಿಯ ಲಕ್ಷಣವೆನಿಸುವುದಾಗಿದೆ-



ಈ ಮಾದರಿಗಳು ಭಾರತೀಯ ವೈಚಾರಿಕ ನಿಲುವುಗಳಿಗೆ ಪ್ರೇರಕಶಕ್ತಿಯಾಗಿ ಮುಂದುವರೆದಿವೆ. ಇವೆಲ್ಲ ರಾಷ್ಟ್ರದ ಆರೋಗ್ಯಪೂರ್ಣ ವೈವಿಧ್ಯತೆಗಳು.

ಆದರೂ ನಾವು ಇವತ್ತು ಮನುಷ್ಯ ಬದುಕಿನ ಚಾರಿತ್ರ್ಯ ಹಾಗು ನೈತಿಕತೆ ಕುರಿತು ಹೆಚ್ಚು ಚರ್ಚಿಸುವುದರ ಅಗತ್ಯತೆ ಕಂಡುಬರುತ್ತಿದೆ.

ಚಾರಿತ್ರ್ಯ ಹಾಗು ನೈತಿಕತೆ ಸುಸಂಸ್ಕೃತಿಯ ಎರಡು ಪ್ರತಿರೂಪಗಳು. ಹೀಗೆಂದುಕೊಂಡಾಗಲು ಮನುಷ್ಯ ಬದುಕಿನ ಅನೇಕ ವೈವಿಧ್ಯಮಯವಾದ ವೃತ್ತಿಗಳು ಇದರಲ್ಲಿ ಅಡಕವಾಗುತ್ತಿವೆ. ಈ ವೃತ್ತಿಗಳು ಮನುಷ್ಯ ಬದುಕಿನ ರೂಪರೇಷಗಳಲ್ಲಿ ಪರಿಣಾಮಕಾರಕವಾದ ಬದಲಾವಣೆ ಮಾಡುತ್ತಿದೆ.

ವೃತ್ತಿ ಪರಿಸರದಲ್ಲಿ ಕಾಮ ಪಾದರಸವೆನ್ನುವುದನ್ನು ಅಲ್ಲಗಳೆಯಲು ಬರುವುದೆ? ಕಾಮ ಗಂಡು-ಹೆಣ್ಣಿನ ಜೀವನದ ನಡುವೆ ಬದುಕುವ ಪ್ರಕೃತಿಯ ಮತ್ತೊಂದು ವಿರೂಪ. ರೂಪ-ವಿರೂಪಗಳ ನಡುವೆ ಚಾರಿತ್ರ್ಯ ಹಾಗೂ ನೈತಿಕತೆ ತಲೆ ಸೇರಿಸುತ್ತಿದೆ. ಈ ಸೇರುವಿಕೆಯಿಂದ ಒಂದು ರಾಷ್ಟ್ರದ ಕಾಮದ ಪರಂಪರೆ ಮಾಸನವಾಗುತ್ತಿದೆ.

ಕಾಮ-ಪ್ರೇಮದ ಮೂಲಕ ಪ್ರೇಮಿಗಳಲ್ಲಿ ವಿನಿಮಯವಾಗುತ್ತಿದೆ. ಈ ವಿನಿಮಯದ ರೀತಿಯೇ ಮನುಷ್ಯನ ಸ್ಥಾನಮಾನಗಳನ್ನು ಗುರ್ತಿಸುತ್ತಿದೆ.

ಮೋಹ ಅನುಮಾನದ ತಾಯಿ.
ಇದರಿಂದಲೇ ಬದುಕಿನಲ್ಲಿ ಅನೇಕ ಅನಾಹುತಗಳು.
ಪ್ರೀತಿ ವಿಶ್ವಾಸದ ತಂದೆ ಎಂದು ತಿಳಿದಾಗಲೇ ಅದಕ್ಕೆ ಪ್ರಾಯಶ್ಚಿತ್ತ.
ಮುಕ್ತ ಪ್ರೇಮ ಇರುವ ರಾಷ್ಟ್ರಗಳಲ್ಲಿ ಇಲ್ಲಿಯಷ್ಟು ಕಾಮಾತುರತೆ ಇದೆ ಎಂದು ಅನಿಸಲಾರದು.
ಕಾಮದ ಗುಪ್ತ ತೃಪ್ತಿಯ ವಿಧಾನಕ್ಕೆ ಇಲ್ಲಿ ಒಪ್ಪಂದ ಇರುವುದು.
ಇದು ಭಾರತೀಯ ಪ್ರಾಚೀನತೆಯ ಪರಂಪರೆಯೂ ಹೌದು.
ಮುಕ್ತ ಕ್ರೀಡೆ ಅನೈತಿಕತೆ.

ಇಬ್ಬರು ಪ್ರೇಮಿಗಳ ನಡುವೆ ವೈವಾಹಿಕ ಪರಂಪರೆ ನಡೆಯುತ್ತಿರುವುದು ಭಾರತೀಯ ಸಂಸ್ಕೃತಿಯ ಚಾರಿತ್ರ್ಯಕ ಸಾರ್ವತ್ರಿಕ ವಿಧಾನ. ಇದನ್ನು ಭಾರತೀಯ ಮನೋಜೀವಿಗಳು, ಮನೋಭಾವಿಗಳು ಒಪ್ಪಿಕೊಂಡಿರುವುದಾಗಿದೆ.

ಹೀಗಿರುವಾಗಲೂ ಚಾರಿತ್ರ್ಯಹೀನ ಕ್ರಿಯೆಗಳು ನಡೆದೇ ಇವೆ. ಸುಮಾರಾಗಿ ಅರ್ಧಕ್ಕಿಂತಲೂ ಹೆಚ್ಚು ಸಂಖ್ಯೆಯಲ್ಲಿ ಚಾರಿತ್ರ್ಯಹೀನ ಕೃತಿ ಅಂದುಕೊಳ್ಳಬಹುದಾದ

ಸಂಬಂಧಗಳೇ ಹೆಚ್ಚು ಜರುಗುತ್ತಿರುವುದು ಒಂದು ದೃಷ್ಟಿಯಿಂದ ಜಾತ್ಯತೀತ ಸಂಪ್ರದಾಯದ ಹುಟ್ಟು ಅನ್ನುವುದಾದರೂ ಭಾರತೀಯ ಮನೋಜೀವಿಗಳು ಇದನ್ನು ಇನ್ನೂ ಸಂಪೂರ್ಣವಾಗಿ ಸ್ವಾಗತಿಸುತ್ತಿಲ್ಲ. ಆದರೂ ಇಂಥ ಅನಿವಾರ್ಯ ಸಂದರ್ಭಗಳಲ್ಲಿ ವಿವಾಹದ ರೂಪಕೊಟ್ಟು ಪ್ರೇಮ ಸಂಪ್ರದಾಯಕ್ಕೆ ಚಾರಿತ್ರ್ಯಕ ರೂಪ ಕೊಡಲಾಗುತ್ತದೆ.

ಈ ವೈವಾಹಿಕ ಸಂಬಂಧದಿಂದ ಹುಟ್ಟುತ್ತಿರುವ ವಂಶಪರಂಪರೆಯಲ್ಲಿ ಚಾರಿತ್ರ್ಯ ಹಾಗು ನೈತಿಕತೆ ಮಾನವೀಯ ಮೂಲಭೂತ ಮೌಲ್ಯಗಳಲ್ಲಿ ದಾಂಪತ್ಯದ ಪ್ರೇಮ-ಕಾಮದ ವಿನಿಯಮಗಳು ಘನನೀಯ ಹಾಗು ಮನನೀಯ ಬಂಧನಗಳಲ್ಲಿ ನಡೆದುದಾದರೆ ಬದುಕು ಸಾರ್ಥಕವೆನಿಸೀತು.

ಜೀವನದಲ್ಲಿ ಅತೀ ಕಾಮುಕತೆಯ ವಿರೂಪತೆಯೇ ಚಾರಿತ್ರ್ಯಹೀನ ಅನೈತಿಕತೆ ಅನಿಸಿಕೊಳ್ಳುತ್ತಿದೆ. ಹುಟ್ಟಿದ ಚಿಕ್ಕಮಕ್ಕಳು ಅಜ್ಞರೆಂಬ ಭಾವನೆಯಿಂದ ಅವರ ಸಮ್ಮುಖದಲ್ಲಿ ರತಿಕ್ರೀಡೆ ನಡೆಸುವವರು ಸಾಕಷ್ಟು ಪ್ರೇಮಿಗಳು ಸಿಗುತ್ತಾರೆ. ಅಂಥವರ ಅಶ್ಲೀಲ ವರ್ತನೆ, ನಗ್ನಸುಖ ಪಡೆಯುವ ಚಿತ್ರಣ ಮಕ್ಕಳ ಮನಸ್ಸಿನಲ್ಲಿ ಅಚ್ಚೊತ್ತಿ ಪ್ರೌಢಾವಸ್ಥೆಯಲ್ಲಿ ಅದು ಅನೈತಿಕ ಸಂಸ್ಕಾರವಾಗಿ ಪರಿಣಮಿಸುತ್ತಿದೆ.

ಅಜ್ಞಾನ ಮಕ್ಕಳ ಮುಂದಿನ ಮನುಷ್ಯ ಬದುಕು ತೀರ ಸೂಕ್ಷ್ಮಚಿಂತನೆಗೊಳಪಡುವುದು ಪ್ರೌಢಾವಸ್ಥೆಯಲ್ಲಿ.

ಹೀಗೆ ನಮ್ಮ ಚಾರಿತ್ರ್ಯಹೀನ ಬದುಕಿನ ಸಂಪ್ರದಾಯದಿಂದ ನಾವು ಒಂದು ಚಾರಿತ್ರ್ಯಕ ಪರಂಪರೆಯನ್ನು ಕಲುಷಿತಗೊಳಿಸಿದಂತಾಗುತ್ತದೆ. ಇಂಥ ಸನ್ನಿವೇಶಗಳು ಇಂದಿನ ಜೀವನದಲ್ಲಿ ಸರ್ವೇಸಾಮಾನ್ಯ.

ಮನಕೆ ಅಂಜುವವಳು ಮಾನಿನಿ
ಜನಕೆ ಅಂಜುವವಳು ಗೃಹಿಣಿ

ಮಾನಿನಿಯ ಅಂತರಂಗದ ಮಾತುಗಳು ಚಾರಿತ್ರ್ಯದ ಸಂಕೇತಗಳಾದರೆ ಗೃಹಿಣಿಯ ಅಂತರಂಗದ ಮಾತುಗಳು ಅನೈತಿಕತೆಯ ಸಂಕೇತಗಳಾಗುತ್ತವೆ. ನಮ್ಮ ವರ್ತನೆ, ನಮ್ಮ ನಡತೆ, ನಮ್ಮ ಬದುಕು ಜಗತ್ತಿನ ಮಹಾನ್ ಕೊಡುಗೆಗಳಾಗಬೇಕು.



## ಬಹೂಪಯೋಗಿಯಾದ ಕಹಿ-ಬೇವು

❁ ಡಾ|| ಎಲ್. ಆರ್. ಹೆಗಡೆ, ಸಿದ್ದಾಪುರ, ಉ. ಕ.

ಸಂಸ್ಕೃತದಲ್ಲಿ ನಿಂಬ, ಪಿಚುಮರ್ದ, ತಿಕ್ತಕ (ಕಹಿರಸ) ಅರಿಷ್ಟ (ಅಶುಭನಿವಾರಕ) ಪಾರಿಭದ್ರ (ಎಲ್ಲ ತರದ ಲಾಭದಾಯಕ) ಹಿಂಗು ನಿರ್ಯಾಸ (ಹಿಂಗಿನಂಥ ಅಂಟನ್ನು ಕೊಡುವಂಥದು) ಮುಂತಾದ ಹೆಸರುಗಳಿವೆ. ಲ್ಯಾಟಿನ್‌ನಲ್ಲಿ ಮೇಲಿಯ ಎಜಾಡಿರೆಕ್ಟಾ ಎಂದು ಹೆಸರಿದೆ. ಕನ್ನಡದಲ್ಲಿ ಬೇವು, ಕಹಿಬೇವು. ಕಹಿಬೇವು ಆರೋಗ್ಯವನ್ನು ಕೊಡುವುದಾದುದರಿಂದ ನಿಂಬ, ಕುಷ್ಠ (ಪಿಚು) ಪುರ್ದಿಸುವುದರಿಂದ ಪಿಚುಮರ್ದ.

ಇಂಗ್ಲೀಷ್‌ನಲ್ಲಿ ಮಾರ್ಗೋಸಾ, ಹಿಂದಿಯಲ್ಲಿ ನೀಮ ಮರಾಠಿಯಲ್ಲಿ ಕಡೂನಿಂಬ ಎಂದೂ ಹೇಳುತ್ತಾರೆ.

ಹೆಬ್ಬೇವು ಎಂದು ಬಹಳ ದೊಡ್ಡದಾಗಿ ಬೆಳೆವ ಮರಕ್ಕೆ ಬೇವಿಗೂ ಹೆಚ್ಚಿನ ಸಾಮ್ಯವಿಲ್ಲ, ಆ ಮರ ಬೇರೆ ವರ್ಗದ್ದು, ಆದರೆ ಅದೂ ಜ್ವರ, ಕೆಮ್ಮು, ದಮ್ಮುಗೆ ನಿವಾರಿಸಲು ಉಪಯುಕ್ತವಾಗಿದೆ.

ಶಿವಶರಣರ ವಚನಗಳು ಅಧರಕ್ಕೆ ಕಹಿ, ಉದರಕ್ಕೆ ಸಿಹಿ, ಎಂದು ಮಹಾಪುರುಷ ಬಸವಣ್ಣನವರು ನುಡಿದುದು ಬೇವಿನ ಗುಣಕ್ಕೆ ಚೆನ್ನಾಗಿ ಹೊಂದುತ್ತದೆ.

ಭಾರತದಲ್ಲೆಲ್ಲಾ ಬೆಳೆಯುವ ಬೇವಿನ ಮರದ ಬೇರಿನ ತೊಗಟೆ, ನೌಂಡತೊಗಟೆ, ಎಲೆ, ಜಗ ಕಾಯಿಹಣ್ಣು, ಅಂಟು, ಬೀಜ ಎಣ್ಣೆ ಇವೆಲ್ಲವೂ ಔಷಧಿಯಲ್ಲಿ ಬಳಕೆಯಾಗುವಂಥವು.

ಇದರ ಬೀಜಗಳಲ್ಲಿ ನೂರಕ್ಕೆ ನಲ್ವತ್ತರಷ್ಟು ತೈಲವಿದ್ದು ಅದರಲ್ಲಿ ಗಂಧಕದ ಅಂಶವಿರುತ್ತದೆ. ಇದರ ಹಿಂಡಿಯು ಅತ್ಯುತ್ತಮ ಸೇಂದ್ರಿಯ ಗೊಬ್ಬರವಾಗಿದೆ. ರಾಸಾಯನಿಕ ಕ್ರಿಮಿನಾಶಕಗಳ ದುಷ್ಪರಿಣಾಮಗಳನ್ನು ತಿಳಿಯ ಹತ್ತಿದ ಮೇಲೆ ಕ್ರಿಮಿ ನಾಶಕವಾದ ಬೇವಿನ ಮರದ ಎಲ್ಲಾ ಅಂಗಗಳ ಮಹತ್ವವು ಜನರಿಗೆ ವಿಶೇಷವಾಗಿ ತಿಳಿಯಲಾರಂಭವಾಗಿದೆ.

ಇದರ ತೊಗಟೆಯಲ್ಲಿ ಹಲವು ಟ್ಯಾಫಿನ್‌ಗಳು ನಿಂಬಿನ್ ಮುಂಕಹಿಯಾದ ಮಾರ್ಗೋಸಿನ್ ತೈಲ, ಗೋಂದು (ಅಂಟು ಮೇಣ) ಸಕ್ಕರೆ ಮುಂತಾದವು ಇರುತ್ತವೆ. ಸಾರ ಭಾಗದಲ್ಲಿ ಪೊಟೆಶಿಯಂ, ಕ್ಯಾಲ್ಸಿಯಂ, ಕಬ್ಬಿಣ ಫಾಸ್ಪರಸ್, ಅಲ್ಯುಮಿನಿಯಂ ಹಾಗೂ ಕಾರ್ಬನ್ ಡಾಯಾಕ್ಸಾಯ್ಡಗಳಿರುತ್ತವೆ.

ಇದು ಶೀತವೀರ್ಯವುಳ್ಳದು ಅಂದರೆ, ಉಷ್ಣವಲ್ಲ ತಂಪು ಎಂದು ತಿಳಿಯಲಾಗಿದೆ ಆದರೆ, ಶತಾಧಿಕ ವಯಸ್ಸಂಪನ್ನರಾದ ಶ್ರೇಷ್ಠರಾದ ಮಲ್ಲಾಡಿಹಳ್ಳಿ ಪೂಜ್ಯ ರಾಘವೇಂದ್ರ ಸ್ವಾಮಿಗಳವರ ಅಭಿಪ್ರಾಯದಂತೆ ಪ್ರಾರಂಭದಲ್ಲಿ ಶೀತವೀರ್ಯವುಳ್ಳುದಾಗಿ ಪರಿಣಾಮ ದಲ್ಲಿ ಉಷ್ಣವೀರ್ಯವುಳ್ಳದಾಗುತ್ತದೆ. (ವನಸ್ಪತಿ ಗುಣಧರ್ಮ.)

ಯುಗಾದಿಯ ದಿನ ಉತ್ತರ ಕನ್ನಡದಲ್ಲಿ ಬೇವಿನೆಲೆಗಳನ್ನು ತುಪ್ಪದಲ್ಲಿ ಹುರಿ ು ವನ್ನು ಊಟದಲ್ಲಿ ಮೊದಲ ತುತ್ತಗಳ ಸಂಗಡ ಉಣ್ಣುತ್ತಾರೆ. ಕಹಿಪರಿಬಾಷ ಕಡಿಮೆ ಮಾಡಲು ಕೆಲವರು ಬೆಲ್ಲವನ್ನು ಸೇರಿಸುತ್ತಾರೆ. ಹೊಟ್ಟೆಹುಳುಗಳ ನಿವಾರಣೆಮಾಡುವುದೇ ಈ ಪದ್ಧತಿಯ ಉದ್ದೇಶವೆಂದು ತಿಳಿವಂತಿದೆ, ಜೀವನದಲ್ಲಿ ಕಷ್ಟ-ಸುಖ ಎರಡೂ ಒಂದರೊಡನೆ ಇನ್ನೊಂದು ಸೇರಿಯೇ ಇರುತ್ತವೆ ಎಂದು ಈ ಬೇವು-ಬೆಲ್ಲ ತಿನ್ನುವುದರ ಸಂಕೇತವೆಂದೂ ಹೇಳಬಹುದು.

ಬೇವು ಬೆಲ್ಲದೊಡನಿರಲೇನು ಫಲ? ಎಂದು ದಾಸವರೇಣ್ಯರು ಕೇಳಿದುದಕ್ಕೆ ಇದೇ ಫಲವೆಂದು ಉತ್ತರ ಹೇಳಬಹುದು.

ತಲೆತಲಾಂತರಗಳಿಂದಲೂ ಹಳೆಜನರು ಬೇವಿನಕಡ್ಡಿಯಿಂದ ಹಲ್ಲುಜ್ಜಿಕೊಂಡು ಬ್ರಶ್, ಪೇಸ್ಟ್ ಎರಡೂ ಆವಶ್ಯಕವಾಗದೆ ಒಳ್ಳೆ ಹಲ್ಲುಗಳನ್ನು ಕಾದುಕೊಂಡಿರುತ್ತಿದ್ದರು.

ಈಗಲೂ ಬೇವಿನ ಮರ ಇಲ್ಲದಲ್ಲಿ, ಸಿಗುವಂತ ಬೇವಿನ ಎಣ್ಣೆಯ ಒಂದು ಎರಡು ಬಿಂದುಗಳನ್ನು ಹಲ್ಲುಗಳಿಗೆ ಇಲ್ಲವೆ ಬ್ರಶ್‌ಗೆ ಹಚ್ಚಿ ಹಲ್ಲುಜ್ಜಿಕೊಳ್ಳುತ್ತಿದ್ದರೆ ಹಲ್ಲುಗಳು ಹಾಳಾಗದಿರಬಹುದು. ಅದರೆ, ಸಿಹಿ ತಿಂಡಿ ತಿಂದ ಆನಂತರವೆಲ್ಲಾ ನೀರಿನಿಂದ ಬಾಯನ್ನು ಚನ್ನಾಗಿ ತೊಳೆದುಕೊಳ್ಳುವುದನ್ನು ಮರೆಯಬಾರದು.

ಪಿತ್ತ, ಕಫ ರೋಗಗಳನ್ನು ವಿಶೇಷವಾಗಿ ಶಮನಮಾಡುವ ಬೇವು ಆಮದೋಷ ವನ್ನು ಜೀರ್ಣಮಾಡುವ ಗುಣವುಳ್ಳುದಾಗಿದ್ದು, ಸಂದು ಬಾವನ್ನು ಶಮನಿಸುವುದಾದ ರಿಂದ ಪಿತ್ತ, ಕಫ, ವಾತ ಈ ಮೂರು ದೋಷಗಳ ಮೇಲೆ ಕೆಲಸಮಾಡುತ್ತದೆ ಎನ್ನಬಹುದು.

ಎಲೆಗಳ ರಸಾಯ ಹಚ್ಚಿ ಅಭ್ಯಂಗ (ಸ್ನಾನ) ಮಾಡುವುದರಿಂದ ಸಂದು ಬಾವು ಮತ್ತು ಆಮವಾತದ ನೋವುಗಳು ಕಡಿಮೆಯಾಗುತ್ತವೆ.

ಸಿಡುಬು, ಗೋಣಿದಡಾರ ರೋಗ ಅದವರಿಗೆ, ಗುಣವಾದ ಮೇಲೆ ಸ್ನಾನ ಮಾಡಿಸುವಾಗ ಬೇವಿನೆಲೆಗಳನ್ನು ಜಜ್ಜಿ, ನೀರಿಗೆ ಹಾಕಿ ಕಾಯಿಸಿದ ನೀರಿನಿಂದ ಸ್ನಾನಮಾಡಿಸುವ ಪದ್ಧತಿಯು ಈಗಲೂ ಉಂಟು. ಕ್ರಿಮಿನಾಶಕವೂ ಹುಣ್ಣುಗಳನ್ನು ಮಾಯಿಸಲು ಸಹಾಯಕವಾದ ಬೇವು ಇದಕ್ಕೆ ಪ್ರಶಸ್ತವಾಗಿದೆ.



ಮುದಕರಾಗುವವರ ಪಾಲಿತ್ಯ ಮತ್ತು ಖಾಲಿತ್ಯ (ನರೆ ಮತ್ತು ತೆರೆ) ಅಂದರೆ ಕೂದಲು ಬೆಳ್ಳಗಾಗುವ ಹಾಗೂ ಚರ್ಮ ಸುಕ್ಕುಗಟ್ಟುವ ತೊಂದರೆಗಳಿಗೆ ಬೇವಿನೆಣ್ಣೆ ಯನ್ನು ನಸ್ಯರೂಪದಲ್ಲಿ ಪ್ರಯೋಗಿಸುತ್ತಾರೆ. ಆಗ ಆಕಳ ಹಾಲನ್ನು ಸೇವಿಸಬೇಕು.

(ವೈದ್ಯಶಿರೋಮಣಿಯಾಗಿದ್ದ ಸುಶ್ರುತ ಪಂಡಿತರ ಅಭಿಪ್ರಾಯದಲ್ಲಿ ನೆಗಡಿಯಾದ ವರು, ಜೀರ್ಣವಾದವರು, ಚಿಂತೆಯ ಬೇಗೆಯಲ್ಲಿರುವವರು ಕೋಪಿಷ್ಠರು ಮುಂತಾ ದವರಿಗೆನಸ್ಯ ಮಾಡಿಸಬಾರದು.)

ದಾಹ (ನೀರಡಿಕೆ)ದಲ್ಲಿ ಎಲೆಗಳ ಸ್ವರಸದ ನೊರೆಯನ್ನು ನಾಲಿಗೆಗೆ ಹಚ್ಚುತ್ತಾರೆ ದಾಹವನ್ನು ಶಮನಿಸುವುದಾದುದರಿಂದ ಬೇವು ಶೀತವೀರ್ಯವುಳ್ಳದು ಎನ್ನಲು ಕಾರಣ.

ಪೂಜ್ಯ ರಾಘವೇಂದ್ರಸ್ವಾಮಿಜಿಯವರು ಒಂದು ಬೇವಿನೆಲೆಯಿಂದ ಪ್ರಾರಂಭ-ಮಾಡಿ, ದಿನಾ ಬೆಳಿಗ್ಗೆ ಹಸಿದಿದ್ದಾಗ ಒಂದೊಂದು ಎಲೆಯನ್ನು ಹೆಚ್ಚಿಸಿ ತಿನ್ನುತ್ತ ಒಂದು ಹಿಡಿ (ಮುಟ್ಟೆ) ಎಲೆಗಳಾಗುವ ವರೆಗೆ ತಿನ್ನುವ ಕ್ರಮವನ್ನು ತಿಳಿಸಿದ್ದರು. ದಿನಾಲು ಹೀಗೆ ತಿಂದರೆ ಪುರುಷರ ಸಂತಾನ ಪ್ರದಶಕ್ತಿಯ ಮೇಲೆ ವಿರುದ್ಧ ಪರಿಣಾಮ ವಾಗಬಹುದೇನೋ.

ಬೇವಿನ ಎಲೆಯನ್ನು ದಿನಾಲು ಅಗಿಯುತ್ತಿದ್ದರೆ, ಅದು ಬಾಯಿ, ಮತ್ತು ಗಂಟಲಿನಲ್ಲಾಗಬಹುದಾದ ಏಡಿಗಂತಿಯ ಪ್ರತಿಬಂಧಕವಾಗುವುದು ಎಂಬ ವಿಷಯವು ತಿಳಿದು ಬಂದಿದೆ. ತಂಬಾಕಿನ ವೀಳ್ಯವನ್ನು ತಿನ್ನುವ ಜನರೂ ಈ ಸಂಗತಿಯನ್ನು ಲಕ್ಷಿಸಿ, ಅದರಂತೆ ಮಾಡಿ, ಏಡಿಗಂತಿಯ ಭಯಂಕರ ರೋಗದಿಂದ ತಮ್ಮನ್ನು ಸಂರಕ್ಷಿಸಿಕೊಳ್ಳಬಹುದು.

ಆಗಾಗ ಬೇವಿನೆಲೆಗಳ ಕಷಾಯದಿಂದ ಬಾಯಿ ಮುಕ್ಕಳಿಸುತ್ತಿದ್ದರೆ (ಗಂಡೂಷ ವಿಧಿಯಿಂದ) ಏಡಿಗಂತಿ ರೋಗವಾಗದಂತೆ ತಡೆಗಟ್ಟಿಕೊಳ್ಳಬಹುದು. ಇದರಿಂದಬಾಯಿ ಹುಣ್ಣು ಗುಣವಾಗುವುದು; ಮತ್ತು ಹಲ್ಲು ಹಾಗೂ ಒಸಡುಗಳ ರೋಗ ಶಮನ ವಾಗುವುದು. ಬಾಯಿದುರ್ಗಂಧ ನಿವಾರಣೆಗೆ ಕಷಾಯಕ್ಕೆ ಏಲಕ್ಕಿ ಸೇರಿಸಬಹುದು.

ಕೆಮ್ಮಿಗೆ ತೊಗಟೆಯ ರಸ ಮತ್ತು (ಇಲ್ಲವೆ) ಕಷಾಯವನ್ನು ಕುಡಿಯಬೇಕು.

ಗಂಟು ಹಾಗೂ ಹುಣ್ಣು, ಬಾವುಗಳ ಮೇಲೆ ಎಲೆಗಳನ್ನು ಅರೆದು ಲೇಪಿಸುತ್ತಾರೆ. ಚರ್ಮರೋಗಗಳಲ್ಲಿ ಬೇವು ಅತ್ಯುತ್ತಮವಾಗಿ ಗುಣಕಾರಿಯಾಗುತ್ತದೆ. ತುರಿಕೆಯ ಚರ್ಮರೋಗಗಳಲ್ಲಿ ಎಲೆಗಳ ಕಷಾಯ ಮಾಡಿ ಅದರಿಂದ ಸ್ನಾನ ಮಾಡಿಸುತ್ತಾರೆ, ಹಾಗೆಯೇ —— ಅದರ ತೈಲ ಲೇಪನ ಸಹಾಮಾಡುವುದರಿಂದ ವಿಶೇಷಗುಣ ಕಂಡು ಬರುತ್ತದೆ. ಎಲೆಗಳನ್ನು ಅರೆದು, ಅರಿಸಿನ, ಕಾಡ ಜೀರಿಗೆ ಪುಡಿ ಸೇರಿಸಿ ಲೇಪಿಸಿದರೆ ಹೆಚ್ಚಿನ ಪರಿಣಾಮಕಾಣುವುದು.

ಎಲರ್ಜಿ ಚರ್ಮರೋಗದಲ್ಲಿ ನಾಲ್ಕು ದಿನಗಳಿಗೊಮ್ಮೆ ಬೆಳಿಗ್ಗೆ ಒಂದೊಂದು ಚಮಚ ಎಲೆಗಳ ಸ್ವರಸವನ್ನು ಅರಿಶಿನ ಸೇರಿಸಿ ಸೇವಿಸುವುದರಿಂದ ಮೂರು ತಿಂಗಳಲ್ಲಿ ಆ ರೋಗ ಗುಣವಾಗುವುದೆಂದು ಒಬ್ಬ ಅನುಭವಿಕರು ನನಗೆ ಮಾಹಿತಿ ನೀಡಿದ್ದರು. ರಕ್ತಶುದ್ಧಿಗೆ ಗುಗ್ಗುಲ ತಿಕ್ತಕ (ಕೊಟ್ಟಾಕಲ್ ಕಂಪನಿಯ ಗುಲ್‌ಗುಲ್ ತಿಕ್ತಕ) ಉತ್ತಮವಾಗಿದೆ. ಗಂಟುಗಳನ್ನು ಕರಗಿಸುವುದು.

ಬೇವಿನೆಲೆಗಳ ಕಷಾಯ, ಇಲ್ಲವೇ ತೊಗಟೆ ಕಷಾಯ ಸೇವನೆಯಿಂದಲೂ ರಕ್ತ ಶುದ್ಧಿಯಾಗುವುದು. ಎಲರ್ಜಿ ಚರ್ಮರೋಗದಲ್ಲಿ ತಯಾರಿ ಔಷಧಿಗಳಲ್ಲೊಂದಾದ ನಿಂಬಹರಿದ್ರಾಖಂಡ ಸೇವನೆ ಹೆಚ್ಚಿನ ಗುಣವನ್ನು ತರಬಲ್ಲದು. ಯಾಕೆಂದರೆ, ಇದರಲ್ಲಿ ಬೇವಿನ ಸಂಗಡ ಅರಿಸಿನ, ಮರದರಿಸಿನ (ದಾರು ಹರಿದ್ರಾ) ಸಹ ಒಗ್ಗದಿಕೆಯ ಮೇಲೆ ಉತ್ತಮ ಪರಿಣಾಮ ಮಾಡುವ ವನಸ್ಪತಿಚೂರ್ಣ ಸೇರಿರುತ್ತವೆ.

ನುಗ್ಗೆಕಾಯಿ ಹಾಗೂ ಬೇವಿನೆಲೆ ಸೇರಿಸಿ ಮಾಡಿದ ಸಾಂಬಾರ್ ಉಣ್ಣುವುದು ಕುರು, ರಾಜಕುರು, ಗಂತಿಗಳು, ಹಾಗೂ ಅಧಿಕ ರಕ್ತದೊತ್ತಡಗಳ ಮೇಲೆ ಉತ್ತಮ ಪರಿಣಾಮ ನೀಡುತ್ತದೆ. ಡಾ|| ಎನ್. ಎನ್. ಸಹಾ ಹಸಿ ಬೇವಿನೆಲೆರಸದಲ್ಲಿ, (ಕಷಾಯ ತಣಿಸಿದ ಮೇಲೆ) ಜೇನುತುಪ್ಪ ಸೇರಿಸಿ ಸೇವಿಸುವುದು ಉತ್ತಮವಾಗುತ್ತದೆ.

ಈ ಸಾಂಬಾರು ಅಪಸ್ಮಾರದ ಸೆಳವುಗಳ ಮೇಲೂ ಒಳ್ಳೆ ಪರಿಣಾಮ ಬೀರುವುದು. ಅರಿಸಿನ ಕಾಮಲೆಗೆ ಗುಣಕಾರಿಯಾಗುವುದು. ಬೇವಿನೆಲೆಗಳ ದೇಟು (ದಂಟು) ಕೆಮ್ಮು ಮತ್ತು ದಮ್ಮುಗಳನ್ನು ನಿವಾರಿಸುತ್ತದೆ ಕಹಿಬೇವಿನೆಲೆರಸ ಮತ್ತು ಕರಿಮೆಣಸಿನ ಪುಡಿ ಸೇರಿಸಿ ಸೇವಿಸಿದರೆ ರಕ್ತಶರ್ಕರೆಯನ್ನು ಕಡಿಮೆ ಮಾಡುತ್ತದೆ. ಇದನ್ನು ಸೇವಿಸುವ ಮೊದಲು ಕಹಿ ಬೇವಿನೆಣ್ಣೆಯಿಂದ ಮೈಗೆ ತಿಕ್ಕಿಸಿಕೊಂಡು, 1 ಗಂಟೆ ಬಿಟ್ಟು, ಸ್ನಾನದ ಮೊದಲಾಗಲಿ ಅನಂತರವಾಗಲಿ ಸೇವಿಸಬೇಕು.

ಬೆಂಗಳೂರಿನ ಡಿ.ಆರ್.ಡಿ.ಓ ಟೌನ್‌ಶಿಪ್‌ನಲ್ಲಿನ, ವಾರದಲ್ಲಿ ನಾಲ್ಕು ದಿನ ಹೊಮಿಯೊಪಥಿ ಚಿಕಿತ್ಸೆಯನ್ನು ಮುಫತ್ತಾಗಿ ನೀಡುತ್ತಿರುವ ಹೋಮಿಯೊಪಥಿಕ್ ಸೆಲ್ಫ್ ರಿಲಾಯನ್ಸ್ ಫೋರಂ, (ಹೊಮಿಯೊಪಥಿ ಸ್ವಾವಲಂಬನ ವೇದಿಕೆ) ಅವರು 'ಮಧುರಿಮಾ' ಎಂಬ ವಿಶಿಷ್ಟ ಔಷಧಿಯನ್ನು ಮಧುಮೇಹದವರ ಚಿಕಿತ್ಸೆಗಾಗಿ ಸಿದ್ಧ ಮಾಡಿದ್ದಾರೆ. ಅದರಲ್ಲಿ ಕಹಿಬೇವು, ಹಾಗಲಕಾಯಿ, ಬಿಲ್ವಪತ್ರೆರಸ ಮತ್ತು ಅಮೃತ ಬಳ್ಳಿ ಸೇರಿಸಿ ಹೊಮಿಯೊಪಥಿಯ ಔಷಧಿ ಸಿದ್ಧಗೊಳಿಸುವ ಕ್ರಮದಿಂದ ತಯಾರಿಸಿ ದಾಗಿ ತಿಳಿಯುತ್ತದೆ.

ಯಲ್ಲಾಪುರದ ಆಯುರ್ವೇದ ಚಿಕಿತ್ಸಕ ಡಾ.ಜಿ.ಪಿ. ಭಟ್ಟಮದ್ಗುಣಿ ಅವರು ಮಧುಮೇಹಿಗಳಿಗೆ ಸೇವಿಸಲು ಯೋಗ್ಯವಾದ ನಿಂಬಮಧು ಎಂಬ ವಿಶಿಷ್ಟ ಜೇನು ತುಪ್ಪವನ್ನು ತಯಾರಿಸಿರುತ್ತಾರೆ.



ಕಹಿಬೇವಿನ ಎಲೆಗಳನ್ನು ಸೇರಿಸಿ, ಸಿಹಿ ಹಾಕದೆ ಮಾಡಿದ ಗೊಜ್ಜು ಹಾಗಲ ಕಾಯಿ ಗೊಜ್ಜಿನ ಹಾಗೆಯೇ ರುಚಿಕರವಾಗಿದ್ದು ಮಧುಮೇಹದವರಿಗೆ ಸಹಾಯಕ ವಾಗುತ್ತದೆ. ಕಣ್ಣುಗಳ ರೋಗಗಳಲ್ಲಿ ಹೂವುಗಳ ಹಾಗೂ ಎಲೆಗಳ ಸ್ವರಸವನ್ನು ಕಣ್ಣುಗಳಿಗೆ ಹಾಕುತ್ತಾರೆ.

ಕಹಿಬೇವಿನ ಬೀಜಗಳ ಜೊರ್ಗಿವು ಕಷ್ಟ ಪ್ರಸವ (ಹೆರಿಗೆ) ಮತ್ತು ಬಾಣಂತಿ ರೋಗಗಳ ಮೇಲೆ ಕೆಲಸ ಕೊಡುತ್ತದೆ. ಗರ್ಭಾಶಯಕ್ಕೆ ಇದರಿಂದ ಬಲ ಬರುತ್ತದೆ. ಮೂಲವ್ಯಾಧಿಯ ಮೊಳಿಗಳ ಮೇಲೆ ಬೀಜಗಳನ್ನರೆದು ಲೇಪ ಮಾಡುತ್ತಾರೆ. ಬೀಜ ಚೂರ್ಣವನ್ನು ಸೇವನೆಗೆ ಕೊಡುತ್ತಾರೆ. ಈ ರೋಗಕ್ಕೆ ಕಹಿ ಬೇವು ವಿಶೇಷ ಗುಣ ಕಾರಿಯಾಗಿದೆ. (ಡಾ. ಸತ್ಯನಾರಾಯಣ ಭಟ್ಟ ಎಂ. ಡಿ. ಮೈಸೂರು '(ನಾಸತ್ಯ)' ತಲೆಯಲ್ಲಾಗುವ ಕ್ರಿಮಿಗಳನ್ನು ಕೊಲ್ಲಲು ಬೀಜಗಳ ಚೂರ್ಣವನ್ನು ಹಚ್ಚುತ್ತಾರೆ

ಅರುಚಿ, ಕಾರದ ಕ್ರಿಮಿ (ಹೊಟ್ಟೆಹುಳು), ಹಾಗೂ ಪಿತ್ತಾಶಯ ವಿಕಾರಗಳಲ್ಲಿ ತೊಗಟೆ ಜಜ್ಜಿ ರಸ ತೆಗೆದು ಜೇನು ತುಪ್ಪದ ಸಂಗಡ ಕೊಡುತ್ತಾರೆ ಬೇವು ಯಕೃ ತ್ತನ್ನು (ಲಿವರ್)ಉತ್ತೇಜಿಸುತ್ತದೆ. ಪಿತ್ತವನ್ನು ನಿವಾರಿಸುತ್ತದೆ.

ಹೊಟ್ಟೆ ಹುಳುಗಳ ತೊಂದರೆಯಲ್ಲಿ ಕಹಿಬೇವಿನ ಚಿಗುರು ಓಮ (ಅಜವಾನ) ವನ್ನೂ ಸರಿಯಾಗಿ ಸೇರಿಸಿ ಚೂರ್ಣಮಾಡಿ ಜೇನುತುಪ್ಪದಲ್ಲಿ ಕಲಸಿ, ಒಂದುವಾರ ನೆಕ್ಕಬೇಕು. ಇದರಿಂದ ಈ ಬಾಧೆ ಗುಣವಾಗುವುದು. (ಪಾಣಾಜೆ ವೈದ್ಯ ಕೈ. ಶಂಕರ ನಾರಾಯಣ ಭಟ್ಟರ 'ಅಜ್ಜಮದ್ದು' ಗ್ರಂಥ)

ವಿವಿಧ ರಕ್ತಜನ್ಯ ವಿಕಾರಗಲು ಸಿಫಿಲಿಸ್ (ಉಪದಂಶ) ಬಾವುಗಳನ್ನು ನಿವಾರಿ ಸುತ್ತದೆ. (ಮೂಲಿಕೆಗಳ ಮಾಯಾಲೋಕ ಡಾ. ನಡಿಬೈಲು ಉದಯಶಂಕರ, ಐ ಬಿ ಹೆಚ್. ಬೆಂಗಳೂರು ಪ್ರಮೇಹ (ಗೊನೊರಿಯಾ)ದ ಮೇಲೆ ಇದು ಕೆಲಸ ಕೊಡುತ್ತದೆ.

ಸಾಮಾನ್ಯ ದೌರ್ಬಲ್ಯದಲ್ಲಿ ಇವರ ಎಳೇ ಎಲೆಗಳ ಹಾಗೂ ಗೋಂದಿನ (ಅಂಟಿನ) ಪ್ರಯೋಗ ಮಾಡುತ್ತಾರೆ ಈ ಉದ್ದೇಶಕ್ಕೆ ಇದರಿಂದ ಸಿದ್ಧಮಾಡಿದ ಮದ್ಯವು ವಿಶೇಷ ಪ್ರಯೋಜಕವಾಗುತ್ತದೆ. ಅದು ದಂತಕ್ಷಯ, ರಾಜಯಕ್ಷ್ಮ (ಕ್ಷಯರೋಗ) ಮುಂತಾ ದವುಗಳನ್ನು ಗುಣಪಡಿಸುತ್ತದೆ.

ಫಲಗಳ (ಜೀರ್ಣಕ್ಕೆ) ಲಘು ಆಗಿದ್ದು ಮಲಬದ್ಧತೆ, ಕುಷ್ಠರೋಗ, ಗುಲ್ಮ (ಗಡ್ಡೆ) ಮೂಲವ್ಯಾಧಿ ಕ್ರಿಮಿ ಮತ್ತು ಮೇಹ ಮೂತ್ರರೋಗ ನಿವಾರಿಸುತ್ತವೆ.

(ಪಂಡಿತ ಪ್ರಿಯವ್ರತ ಶರ್ಮಾ ಹಿಂದೂ ವಿಶ್ವವಿದ್ಯಾಲಯ ಕಾಶಿ) ಫಲಗಳು ರಕ್ತ ಪಿತ್ತರೋಗದಲ್ಲಿಯೂ ಕಫದಲ್ಲೂ ಪ್ರಶಸ್ತ, ನೇತ್ರರೋಗ ಗುಣಕಾರಿ ಗಾಯ ಹುಣ್ಣು ಕ್ಷಯ ನಾಶಕ.

ನಾನಾತರದ ಜ್ವರಗಳಲ್ಲಿ ಕಹಿ ಬೇವಿನ ತೊಗಟೆಯ ಕಷಾಯ ಬಹಳ ಗುಣಕಾರಿಯಾಗುತ್ತದೆ. ನಿಯತಕಾಲಿಕ ಜ್ವರ ಬಿಟ್ಟು ಬಿಟ್ಟು ಬರುವ ಮಲೇರಿಯಾದಲ್ಲಿ ಇದು ಕ್ವಿನ್ವೈನ್‌ಗಿಂತಲೂ ಶ್ರೇಷ್ಠವಾಗಿದೆ. ಕ್ವಿನ್ವಾನ್‌ನ ಕೆಟ್ಟಪರಿಣಾಮಗಳು ಕಿವುಡುತನ ಮಾಡುವುದು ರಕ್ತಕ್ಷೀಣಗೊಳಿಸುವುದು ಮುಂತಾದವು ಇದರಲ್ಲಿಲ್ಲ. ಕಟು ಪೌಷ್ಟಿಕ ಅಂದರೆ ಕಹಿಯಾಗಿದ್ದು ಬಲವನ್ನು ವರ್ಧಿಸುವ ಗುಣ ಇದಕ್ಕಿರುತ್ತದೆ. ಇದು ಜ್ವರದ ಪ್ರತಿಬಂಧಕವಾಗಿಯೂ ಕೆಲಸ ಕೊಡುತ್ತದೆ. ಇವರ ತಯಾರಿ ಔಷಧಿಗಳಲ್ಲಿ ಒಂದಾದ ಸಿಂಬಾದಿವಟಿ (ಉರಿಶೀತಜ್ವರ) ಪ್ರತಿಬಂಧಕವಾಗಿರುತ್ತದೆ. (ಕೈ. ಭಟ್ಟ ಗಜಾನನ ಉಗ್ರ ಗೋಕರ್ಣ ಇವರು ಲೇಕನಿಗೆ ತಿಳಿಸಿದ್ದು) ಇದು ರಕ್ತಶುದ್ಧಿಯನ್ನು ಮಾಡುತ್ತದೆ ಕ್ರಿಮಿಗಳನ್ನು ಕಡಿಮೆ ಮಾಡುತ್ತದೆ. ಚಳಿಜ್ವರ (ಮಲೇರಿಯ) ವಿಷಮಜ್ವರ ಹಾಗೂ ಇತರ ಹಲವು ಜ್ವರಗಳನ್ನು ಗುಣಪಡಿಸುತ್ತದೆ. ಹಳೇಜ್ವರಗಳಲ್ಲಿ ಬೇವಿನ ಔಷಧಿ ಪ್ರಶಸ್ತವಾದದ್ದು.

ಬೇವಿನೆಲೆಗಳ ರಸದಲ್ಲಿ ಜೇನು ತುಪ್ಪ ಸೇರಿಸಿ ದಿನದಲ್ಲಿ ಎರಡು ಮೂರು ಸಾರಿ ಸೇವಿಸಿದರೆ ಜ್ವರ ಕಡಿಮೆಯಾಗುತ್ತದೆ. ಸಾಮಾನ್ಯ ತಲೆಕಡಿತ ಬಂದಾಗ ಬೇವಿನೆಣ್ಣೆಯನ್ನು ಹಣೆಯ ಮೇಲೆ ಹಚ್ಚಿದರೆ ಗುಣವಾಗುತ್ತದೆ. ಬೇವಿನೆಣ್ಣೆ ಬಹಳ ಕಹಿಯಾಗಿರುವುದರಿಂದ ಮೈಗೆ ಹೊದೆದು ಕೊಂಡು, ಮೋರೆಗೆ ಬೇವಿನೆಣ್ಣೆ ತೆಳ್ಳಗೆ ಲೇಪಿಸಿಕೊಂಡರೆ ಸೊಳ್ಳೆಗಳು ಕಡಿಯುವುದಿಲ್ಲ ಎಂದು ತಿಳಿಯಬಹುದು. ಮಹಾತ್ಮಾ ಗಾಂಧಿಯವರು ಸೊಳ್ಳೆಗಳ ತೊಂದರೆಯಲ್ಲಿ ಮೋರೆಗೆ ಸೀಮೆ (ಚಿಮಣಿ) ಎಣ್ಣೆ ಹಚ್ಚಿಕೊಂಡು ಮಲಗಬೇಕೆಂದು ಸಲಹೆ ನೀಡಿದ್ದರು. ಅದಕ್ಕಿಂತಲೂ ಬೇವಿನೆಣ್ಣೆ ಹೆಚ್ಚು ಉತ್ತಮ. ವೈದ್ಯನಾಥ ಕಂಪನಿಯ ನೀಮ್ ಬಯ್ಲ ಪೇಟೆಯಲ್ಲಿ ಲಭ್ಯವಿರುತ್ತದೆ) ನಾಡೀವ್ರಣಗಳಲ್ಲಿ ಇದರ ಎಣ್ಣೆಯ ವರ್ತಿ (ಬತ್ತಿ)ಯನ್ನಿಡುತ್ತಾರೆ

ಒರಿಸಾದ ಗಿರಿಜನ ಹೆಂಗಸರು ಬೇವಿನ ಎಲೆಗಳನ್ನು ಜಜ್ಜಿ ಯೋನಿಯಲ್ಲಿಟ್ಟುಕೊಂಡು ಇದು ವೀರ್ಯಾಣುಗಳನ್ನು ಕೊಲ್ಲುವುದರಿಂದ ಸಂತತಿ ಪ್ರತಿ ಬಂಧದ ಉದ್ದೇಶವನ್ನು ಸಾಧಿಸಿಕೊಳುತ್ತಾರೆ ಎಂಬುದನ್ನ ತಿಳಿದಿದ್ದೇವೆ.

ಮಹಾ ಕುಷ್ಠರೋಗಿಗಳು ಬೇವಿನೆಲೆಗಳ ತುಂಬಿರುವ ಉದ್ಯಾನದಲ್ಲಿ ವಾಸವಾಗಿದ್ದು ಬೇವಿನೆಲೆಗಳನ್ನು ಅರೆದು ಮೈಗೆ ಲೇಪಿಸಿಕೊಳ್ಳುತ್ತಿದ್ದು ಎಲೆಗಳನ್ನು ತಿನ್ನುತ್ತಿರುವುದರಿಂದಲೇ ಗುಣಪಡಿಸಿಕೊಳ್ಳುತ್ತಿದುದನ್ನು ಓದಿದ್ದು ನೆನಪಿದೆ. ಸಾಮಾನ್ಯವಾಗಿ ಗಿಡಮರಬಳ್ಳಿಗಳು ಹಗಲಿಗೆ ಕಾರ್ಬನ್ ಡಯಾಕ್ಸಾಯ್ಡನ್ನು ಹವೆಯಿಂದ ಎಲೆಗಳ ಮೂಲಕ ಹೀರಿಕೊಂಡು ಆಕ್ಸಿಜನ್ ಹವೆಯಲ್ಲಿ ಬಿಡುತ್ತವೆ. ಆದರೆ ರಾತ್ರಿ ಕಾಲವೂ ಕಾರ್ಬನ್ ಡಾಯೊಕ್ಸಾಯ್ಡ ಬಿಡುತ್ತವೆ. ಆದರೆ ಕಹಿಬೇವು ರಾತ್ರಿ ಸಹಾ ಆಕ್ಸಿಜನ್ ಹೊರಹಾಕಿ ಹವೆಯ ಶುದ್ಧತೆಯನ್ನು ಆಗಲೂ ಕಾಪಾಡುತ್ತದೆ. ಅಶ್ವತ್ಥ ಎಕ್ಕೆಗಳಂತೆ ಇದು ಸೂರ್ಯವೃಕ್ಷವಾಗಿದೆ.

ಪ್ರಮಾಣ ತೊಗಟೆಯ ಚೂರ್ಣ ಒಂದೆರಡು ಮಾಸಿ ಇಲ್ಲವೆ 2 ಗ್ರಾಂ-4 ಗ್ರಾಂ ಎಲೆ ರಸ ಒಂದೆರಡು ತೊಲೆ ಇಲ್ಲವೆ 10–20 ಮಿಲಿ ಲೀಟರ್ ಎಣ್ಣೆ 5 ರಿಂದ 10 ಬಿಂದು ❀

## ವಚನ ಸಾಹಿತ್ಯದ ಸೊಗಸು

❀ ಎಸ್. ಎಂ. ಸಜ್ಜನ್, ಕನ್ನಡ ಅಧ್ಯಯನ ವಿಭಾಗ, ಇನ್‌ಸ್ಟಿಟ್ಯೂಟ್ ಆಫ್ ಏಷಿಯನ್ ಸ್ಟಡೀಸ್ ಚೆಮ್ಮಂಚೇರಿ, ಶೋಲಿಂಗನಲ್ಲೂರ್ ಅಂಚೆ, ಮದರಾಸು-600119

ವಚನ ಎನ್ನುವದು ಕನ್ನಡದಲ್ಲಿ ವಿಶಿಷ್ಟ ಪ್ರಕಾರದ ಸಾಹಿತ್ಯ. ಯಾವುದೇ ಆದರ್ಶ ಅನುಕರಣೆಗೆ ಇಟ್ಟುಕೊಳ್ಳಲಾರದೆ ಹುಟ್ಟಿಬಂದ ಸಾಹಿತ್ಯ. ಹನ್ನೆರಡನೇ ಶತಮಾನದಲ್ಲಿ ಇತರ ಸಾಹಿತ್ಯಕ್ಕೆ ಹೋಲಿಸಿ ನೋಡಿದರೆ ವಿಶ್ವ ಸಾಹಿತ್ಯಕ್ಕೆ ಕನ್ನಡದ ಹೆಮ್ಮೆಯ ಕೊಡುಗೆ ಎಂದೇ ಹೇಳಬಹುದು.

ವಚನ ಎಂದರೆ ಸಂಸ್ಕೃತದಲ್ಲಿ 'ಮಾತು'. ಮಾತನಾಡುವುದು ವ್ಯಕ್ತ ಪಡಿಸುವುದು ಮುಂತಾದ ಅರ್ಥಗಳಿದೆ ಸಂಸ್ಕೃತದ ಹಳಗನ್ನಡ ಕಾವ್ಯಗಳಲ್ಲಿ ಅಂದರೆ ಗದ್ಯಪದ್ಯ ಮಿಶ್ರಿತ ಚಂಪೂ ಕಾವ್ಯಗಳಲ್ಲಿ ಮಧ್ಯ ಅಲ್ಲಲ್ಲಿ ಬರುವ ಗದ್ಯ ಭಾಗವನ್ನು ವಚನವೆಂದು ಕರೆದುದು ನಾವು ಕಾಣುತ್ತೇವೆ. ತೀ. ನಂ. ಶ್ರೀಯವರು ಹೇಳುವಂತೆ ವಚನಗಳ ಧಾಟಿ ಪದ್ಯದಷ್ಟು ಬಿಗಿಯುಳ್ಳದಲ್ಲ, ಸಾಮಾನ್ಯ ಗದ್ಯದಷ್ಟು ಸಡಿಲವೂ ಅಲ್ಲ. ಸೂಕ್ಷ್ಮವಾಗಿ ವಿಚಾರಿಸಿದರೆ ವಚನಗಳು ಗದ್ಯ ಪದ್ಯದ ನಡುವಿನ ಒಂದು ಮಾದರಿಯೆಂದೇ ಹೇಳಬೇಕಾಗುವುದು ಎನ್ನುತ್ತಿದ್ದಾರೆ. ವಚನಗಳು ಸರಳ, ಸಹಜ, ಸಂಕ್ಷಿಪ್ತತೆ, ಸ್ವಚ್ಛಂದ, ಮೌಲಿಕ ಲಲಿತ ಶೈಲಿಗಳಿಂದ ಕೂಡಿದವುಗಳಾಗಿವೆ.

ಹನ್ನೊಂದು ಮತ್ತು ಹನ್ನೆರಡನೆಯ ಶತಮಾನಕ್ಕಿಂತ ಪೂರ್ವದಲ್ಲಿ ವಚನಗಳನ್ನು ಹೋಲುವ ರಚನೆಗಳು ದೇಶಿಯ ಭಾಷೆಗಳಲ್ಲಿ ಸಂಸ್ಕೃತದಲ್ಲಿ ಕಾಣಿಸಿ ಕೊಂಡಿಲ್ಲವಾದರೂ ಶರಣರ ವಚನಗಳ ರಚನೆ ಹೇಗಾಯಿತು? ಮಾದರಿ ಯಾವುದು? ಎಲ್ಲಿಂದ ಇವರಿಗೆ ಪ್ರೇರಣೆ ಸಿಕ್ಕಿತು? ಸ್ವತಂತ್ರವಾಗಿ ರೂಪಿಸಿಕೊಂಡರೆ ನಷ್ಟವಾದ ಪ್ರಕಾರವನ್ನು ಅನುಕರಿಸಿದಾರೆ ಮುಂತಾದ ಪ್ರಶ್ನೆಗಳು ಸಂಶೋಧಕನ ಗಮನ ಸೆಳೆಯುತ್ತವೆ. ಹನ್ನೆರಡನೇ ಶತಮಾನಕ್ಕಿಂತ ಪೂರ್ವದಲ್ಲಿ ರಾಜಾಶ್ರಯವಾಗಿರುವ ಸಾಹಿತ್ಯ ಹನ್ನೆರಡನೇ ಶತಮಾನದಲ್ಲಿ ಜನಾಶ್ರಯವಾಗಿ ಬೆಳೆದು ಬಂದದ್ದರ ಒಂದು ಚರ್ಚೆ ಇಲ್ಲಿ ನಡೆದಿದೆ.

ಡಿ. ಎಲ್. ನರಸಿಂಹಾಚಾರ್ಯರು ವಚನಗಳಿಗೆ ಮೂಲ ತಮಿಳಿನ ನಾಯನಾರ್ಯರ "ತೇವಾರಂ" ಎಂಬ ಹಾಡುಗಳೆಂದು ಅವುಗಳನ್ನ ವಚನಕಾರರು ಅನುಸರಿಸಿ "ಗದ್ಯದಲ್ಲಿಯೇ ತಾಳಮಾನವನ್ನಿಟ್ಟು ಅದನ್ನೇ ಗೀತವೆಂದು ಕರೆದಿರುವಂತೆ ತೋರುತ್ತದೆ" ಎಂದಿದ್ದಾರೆ.

...37ಕ್ಕೆ

ಎಲ್ ಬಸವರಾಜುರವರು ಸಂಸ್ಕೃತದ ಛಂದೋಗಂಥಿಗಳಾದ ಗಸ್ಯ ಪ್ರಕಾರ ಸ್ತೋತ್ರಗಳು ವಚನಗಳಿಗೆ ಬಾಹ್ಯ ಮಾದರಿಗಳೆಂದು ಒಮ್ಮೆ ಅಭಿಪ್ರಾಯಪಟ್ಟು ಆ ಮೇಲೆ ಅದನ್ನ ಸರಿಯಾಗಿ ಕೈಬಿಟ್ಟು ಮುಂದೆ ಕನ್ನಡ ಗದ್ಯಕ್ಕೆ ವೇದ ಉಪನಿಷತ್ತು ಬ್ರಾಹ್ಮಣಗಳ ಗದ್ಯ ಸರಣಿಯಲ್ಲಿ ಕಣಿ ಕಟ್ಟಿ ತಮ್ಮ ವಚನ ಪ್ರಕಾರವನ್ನು ನಿಷ್ಪನ್ನ ಮಾಡಿಕೊಂಡರು ಎಂಬ ವಾದವನ್ನು ಮುಂದಿಟ್ಟರು.

ಎಂ. ಚಿದಾನಂದ ಮೂರ್ತಿ ತ್ರಿಪದಿಯೇ ವಚನಕ್ಕೆ ಮೂಲವಾಗಿದ್ದಿರಬಹುದೆಂಬ ಊಹೆಯನ್ನು ಪ್ರತಿಪಾದನೆ ಮಾಡಿದ್ದು. ಅದನ್ನು ಈಗ ಸಮರ್ಥಿಸಿಕೊಳ್ಳುವ ಸ್ಥಿತಿ ಯಲ್ಲಿಯೂ ಇಲ್ಲಿ ಸಂಪೂರ್ಣವಾಗಿ ನಿರಾಕರಿಸುವ ಸ್ಥಿತಿಯಲ್ಲಿಯೂ ಇಲ್ಲ ಎಂದಿದ್ದಾರೆ.

ವಚನಕಾರರು ಯಾರಿಗಾಗಿ ತಮ್ಮ ಸಾಹಿತ್ಯವನ್ನು ರಚನೆಮಾಡಿದರು ಮತ್ತು ಯಾವ ಪರಿಸರದಲ್ಲಿ ನಿಂತುಕೊಂಡು ಮಾಡಿದರು ಎಂಬುದು ಮುಖ್ಯ. ವಚನಕಾರರು "ಕವಿಗಳಲ್ಲಿ" ಅವರು ಮಾಡಿದ ರಚನಾ ಸಾಹಿತ್ಯ ಕಾವ್ಯವಲ್ಲ. ಅವರ ರಚನೆಯ ಆಸ್ವಾದಕರು ಪಂಡಿತ ವರ್ಗವಲ್ಲವಾದರೂ ಕೂಡಾ ಸಮಾಜ ಪ್ರೇರಣೆಯಿಂದ ನೀತಿ ಬೋಧಕರು ವಚನಕಾರರು ತಮ್ಮಲ್ಲಿರುವ ಜ್ಞಾನದ ಅನುಭವವನ್ನು ಸಾಮಾನ್ಯ ಜನರೊಂದಿಗೆ ಹಂಚಿಕೊಳ್ಳುತ್ತ ಸಮಾಜದ ಪ್ರತಿಯೊಂದು ವಸ್ತುವನ್ನು ಪ್ರತಿಮೆ ಯನ್ನಾಗಿ ಮಾಡಿಕೊಂಡು ಜನಸಾಮಾನ್ಯರ ಮನಸ್ಸಿಗೆ ಮುಟ್ಟುವ ಹಾಗೆ ಮಾಡಿದರು. ಹೀಗಾಗಿ ರಾಜಾಶ್ರಯ, ಸ್ತ್ರೀ ಸಮಾನತೆ, ಜಾತಿ ಭೇದ, ಲಿಂಗ ಭೇದ ಮುಂತಾದ ಕೀಳರಿಮೆಯ ಭಾವನೆಗಳಿಗೆ ಪ್ರತಿನಿಧಿಸುವ ಹಾಗೆ ವಚನಗಳು ಅಂದಿನ ಸಮಾಜದ ಜನತೆಗೆ ಕಷ್ಟದಾಯಕವಾಗದೆ ಪುಷ್ಠಿದಾಯಕವಾಗಿ ಪರಿಣಮಿಸಿದವು.

ಎಂ.ಆರ್. ಶ್ರೀನಿವಾಸಮೂರ್ತಿಯವರು ವೈಯಕ್ತಿಕ ಮನೋಭಾವ ಅಂತ ರಂಗದ ಹೋರಾಟ, ಧರ್ಮಬೋಧೆ, ಹೃದಯದಿಂದ ಹೊರಟ ನೇರವಾಗಿ ಹೃದಯವನ್ನು ಮುಟ್ಟುವ ಸರಳ ಶೈಲಿ ಇವು ವಚನಗಳಲ್ಲಿರುವದರಿಂದ ಈ ಸಾಹಿತ್ಯದಲ್ಲಿ ಜೀವಕಳೆ ಯಿಂದ ಮತ್ತು ಈ ಸಾಹಿತ್ಯ ಅಮೂಲ್ಯವಾಗಿದೆ? ಎಂದಿದ್ದಾರೆ.

'ಶೈವ ಸೈವರೆಗಾದ-ಪಾಶು ಪತಿ ಪಥವನರಿಯ, ಕಾಳಾಮುಖಿ
ಕಂಗೆಟ್ಟು ಮಹಾವ್ರತಿ ಮದನೇರಿದ ಸಂನ್ಯಾಸಿ ಪಾಷಂಡಿಯಾದ ಕಾಲಿ
ಮರುಳಾಗಿ ಹೋದ, ಈ ಆರು ಭಕ್ತ ಸ್ಥಲಕ್ಕೆ ಸಲವು ಕೇಳರಣ್ಣಾ

ಎಂದು ಚನ್ನಬಸವಣ್ಣ ಹೇಳಿರುವುದರಿಂದ ವಚನಗಳಿಗೆ ಶೈವ ಸಿದ್ಧಾಂತಗಳೇ ಮೂಲ ಎಂಬುದಕ್ಕಿಂತ ಇಲ್ಲಿ ಹೇಳಿರುವ ಶೈವ ಪಂಥಗಳಾವುವು ಎಂಬುದನ್ನು ಕನ್ನಡಿ



ಸಬೇಕಾಗಿದೆ. ಕಾಶ್ಮೀರ ಶೈವ ಸಿದ್ಧಂತವಾಗಿರಬಹುದು ತಮಿಳುನಾಡಿನಲ್ಲಿ ಪ್ರಚಾರ ದಲ್ಲಿರುವ ಶೈವವಾಗಿರಬಹುದು. ಆದರೆ ಇವುಗಳಿಗೆ ಮೂಲ ಅವುಗಳೇ ಎಂಬುದು ಹೇಳ ಬಹುದು. ಆದುದರಿಂದ ವಚನಗಳು ಹೊಸತು ಎಂದು ಹೇಳಲು ಬರುವದಿಲ್ಲ. ಹಳತೆಂದು ಕೈಬಿಡಲು ಬರುವದಿಲ್ಲ. ಹಿಗಾಗಿ ವಚನದ ನಿರ್ದಿಷ್ಟ ಉಗಮಯಾವಾಗ? ಎಲ್ಲಿಂದ? ಹೇಗೆ ಎಂಬ ಪ್ರಶ್ನೆಗಳಿಗೆ ಉತ್ತರ ಅಸ್ಪಷ್ಟವಾಗಿಯೇ ಗೋಚರಿಸುತ್ತದೆ.

ವಚನಕಾರರು ಸಮಾಜದ ಬೇರೆ ಬೇರೆ ವರ್ಗಗಳಿಂದ ಬಂದವರು. ತಮ್ಮ ವಚನಗಳಿಗೆ ಪರಿಭಾಷಿತ ಪದಗಳನ್ನು ಬಳಸಿ ತಮ್ಮ ಮನಸ್ಸಿನ ಉದ್ವೇಗ ಉಮ್ಮಳ ತಮಗೆ ಓದು ಬರಹ ಬರದಿದ್ದರೂ ಕೂಡಾ ತೀವ್ರ ತರವಾದ ಸಮಾಜ ಪರಿವರ್ತನೆಯ ಕಳಕಳಿಯಿಂದ ಓದು ಬರಹ ಬರದ ಸಾಮಾನ್ಯ ವರ್ಗಕ್ಕೂ ಮುಟ್ಟದದು ಅಂದಿನ ಕ್ರಾಂತಿಯಪರಿಣಾಮ.

ಅಂದಿನ ಪರಿಸರ ವಚನಕಾರರನ್ನು ರೂಪಿಸಿತು. ವಚನಕಾರರು ವಚನಗಳನ್ನು ಸೃಷ್ಠಿಸಿದರು. ವಚನಗಳು ಜನರ ಮನಸ್ಸನ್ನು ಸೆಳೆದವು. ಜನರು ಸಮಾಜದಲ್ಲಿ ಬದಲಾ ವಣೆಯನ್ನು ತಂದು ಕೊಂಡರು.

ವಚನವನ್ನು ಕುರಿತು ಕನ್ನಡ ಕವಿಚರಿತ್ರಕಾರರು ಈ ವಚನಗಳು ಕನ್ನಡ ಸಾಹಿತ್ಯದಲ್ಲಿ ಪೂಜ್ಯ ಸ್ಥಾನ ಪಡೆಯಲು ಅರ್ಹವಾಗಿವೆ ಇವು ಗಾಢವಾದ ವೇದಾಂತ ವಿಷಯಗಳನ್ನು ಸುಲಭವಾದ ಕನ್ನಡ ಮಾತುಗಳಿಂದ ಬಿಗಿಯಾದ ಶೈಲಿಯಲ್ಲಿ ಮನ ಮುಟ್ಟುವಂತೆ ಭೋದಿಸುತ್ತವೆ ಎಂದಿದ್ದಾರೆ.

ಆರ್. ಆರ್. ದಿವಾಕರರವರು ಶುದ್ಧ ಕನ್ನಡದಲ್ಲಿರುವ ವಚನ ಶಾಸ್ತ್ರವೆಂಬ ಆಧ್ಯಾತ್ಮ ಎಲ್ಲಕ್ಕೂ ಶ್ರೇಷ್ಠವಾದ ಮಾನವಧ್ಯೇಯವನ್ನು ತತ್ವ ಪ್ರಧಾನವಾದ ವಿಶಿಷ್ಠ ಉಪಾಸನಾ ಮಾರ್ಗವನ್ನು ಒಳಗೊಂಡಿರುವುದು ಈ ಶಾಸ್ತ್ರಕ್ಕೆ ಶೈವಾಗಮಗಳು ಪ್ರತ್ಯಕ್ಷವಾಗಿಯೂ ವೇದೋಪನಿಷತ್ತುಗಳು ಅಪ್ರತ್ಯಕ್ಷವಾಗಿಯೂ ಮೂಲಾಧಾರಗಳಾ ಗಿರುವುವು ಎಂದು ಹೇಳುತ್ತಾರೆ.

ಎಂ. ಆರ್. ಶ್ರೀಯವರು – ವಚನಗಳಲ್ಲಿ ರಸ, ಭಾವ, ಅಲಂಕಾರಗಳೂ ಉದಾ ತ್ತಧ್ಯೇಯುವೂ ಇರುವುದರಿಂದ ಅವು ಉತ್ತಮ ಸಾಹಿತ್ಯವೆಂದು ಧಾರಾಳವಾಗಿ ಹೇಳ ಬಹುದು. ವಚನಗಳು ಕನ್ನಡ ಸಾಹಿತ್ಯದ ಉಪನಿಷತ್ತುಗಳು ಆ ಕವಿಗಳನ್ನು ಕನ್ನಡ ನಾಡಿನ ರಸ ಋಷಿಗಳು ಎಂದಿದ್ದಾರೆ.

ವಚನಗಳು ಶಾಸ್ತ್ರದಂತೆ ಗಂಭೀರವಾಗಿಯೂ ಸಾಹಿತ್ಯದಂತೆ ಮನೋಹರವಾ ಗಿಯೂ ಇರುತ್ತವೆ. ಸಂಸ್ಕೃತದ ಉಪನಿಷತುಗಳು ತಮಿಳಿನ ತೇವಾರ ಮತ್ತು ತಿರುವಾ ಚಕಂ ಗ್ರಂಥಗಳನ್ನು ಬಿಟ್ಟರೆ ಶಿವ ಶರಣರ ವಚನಗಳಿಗೆ ಸಮವಾದ ವಾಙ್ಮಯವು ಭಾರತದ ಇತರ ಯಾವ ಭಾಷೆಗಳಲ್ಲಿಯೂ ಇಲ್ಲವೆಂದು ವಿದ್ವಾಂಸರ ಅಭಿಮತ.

[illegible] ಗದ್ಯ ಕ್ಲಿಪ್ತ ಛಂದಸ್ಸನ್ನು ತೊರೆದಿದ್ದರೂ ಅದರ ವ್ಯಕ್ತಿತ್ವ [illegible] ಅದು ಗದ್ಯ ರೂಪಧಾರಣೆ ಮಾಡಿದ್ದರೂ ಕಾವ್ಯತ್ವವನ್ನು ಬಿಟ್ಟಿಲ್ಲ [illegible] ಗದ್ಯದ ಪ್ರಕಾರಾಂತರವೇ ವಚನ ಸಾಹಿತ್ಯವಾಗಿ ಹೂ ಬಿಟ್ಟಿತು. ವಚನಗಳು ಈ ಗದ್ಯದಿಂದ ಹೊಮ್ಮಿದ ಬಿಡಿ-ಬಿಡಿಯಾದ [illegible] ಹೂಗಳು ಎಂದು ಹೇಳಿರುವುದು ಸಮಂಜಸವಾಗಿದೆ.

"ಕನ್ನಡ ಸಾಹಿತ್ಯದ ಜೀವರತ್ನಗಳು ಕನ್ನಡ ನುಡಿಯ ಚೆಲುವುಗಳು" ಎಂದು ವಚನ ಸಾಹಿತ್ಯದ ಬಗೆಗೆ ವಿಮರ್ಶಕರು ಹೊಗಳಿದ್ದಾರೆ ವಚನ ಸಾಹಿತ್ಯವು ಹುಟ್ಟಿ ಬೆಳೆದು ಬರುವಲ್ಲಿ ಜನ ಜೀವನದಲ್ಲಿಯ ಕೊಳವೆಯನ್ನು ತೊಳೆದು ಹಸನುಗೊಳಿಸುವ ಉದ್ದೇಶವಿರುವುದನ್ನು ಕಾಣಬಹುದು. ನಡೆನುಡಿಗಳ ಸಮನ್ವಯಕ್ಕೆ ಇನ್ನಿಲ್ಲದ ಮಹತ್ವವನ್ನು ಕೊಟ್ಟು ಶರಣರ ಜೀವನ ಒಳಗೂ ಹೊರಗೂ ಸ್ಪಟಿಕದಂತೆ ನಿರ್ಮಲವಾಗಿತ್ತು.

ಇಂದಿಗೂ ನಮಗೆ ಇಂದಿನ ಹೊಸ ಅಭಿರುಚಿಗೂ ಪ್ರಿಯರ್‍ಆಗುವಂತೆ ಅವರ ವಚನಗಳು ಎಂದೆಂದಿಗೂ ಹಳೆಮೆಯನ್ನರಿಯದ ಅಪ್ಪಟ ಸಾಹಿತ್ಯವಾಗಿದೆ. ಹೀಗೆ ವಚನ ಸಾಹಿತ್ಯದಲ್ಲಿ ತುರ್ತು ಒತ್ತಡಕ್ಕೊಳಗಾಗಿ ಹೇಳಿದಂಥ ಜೀವನ ಮೌಲ್ಯಗಳೊಡನೆ ಸರ್ವಕಾಲಿಕವಾಗಿ ನಿಲ್ಲ ಬಲ್ಲ ಜೀವನದ ಅನೇಕ ಮೌಲ್ಯಗಳ ಪ್ರತಿಪಾದನೆಯು ಇದೆ. ಮಹಾ ವ್ಯಕ್ತಿಗಳು ಅಂದಂದಿನ ಯುಗದ ಕವಿವಾಣಿಯ ಮೂಲಕ ರೂಪಿತವಾದ ವಚನ ಸಾಹಿತ್ಯವು ಕನ್ನಡದ ಹೆಮ್ಮೆಯ ಆಸ್ತಿಯಾಗಿದೆ. ಕನ್ನಡ ಉಪನಿಷತ್ತು ಆಗಿದೆ. ವಿಶ್ವಸಾಹಿತ್ಯಕ್ಕೆ ಕನ್ನಡವು ಸಲ್ಲಿಸಿರುವ ಕಾಣಿಕೆಯಾಗಿದೆ.

ಇ. ಪಿ. ರಾಯಿಸ್‌ರವರು ಇಂಗ್ಲೆಂಡದಲ್ಲಿ ವಾಯುಕ್ಲಿಫ್ ನಂತಹರ ಬರವಣಿಗೆಯಿಂದ ತಲೆದೋರಿದ ಆಂಗ್ಲ ಭಾಷಾ ಶೈಲಿಯೊಡನೆ ವಚನ ಸಾಹಿತ್ಯದ ಶೈಲಿಯನ್ನು ಹೋಲಿಸಿ ಹೀಗೆ ಹೇಳಿದ್ದಾರೆ. ಅವುಗಳ ಶೈಲಿ ಸೂತ್ರ ರೂಪವಾಗಿದೆ. ಅನ್ಯರೂಪತೆ ಮತ್ತು ಪೂರ್ವಕಥಾ ಸೂಚಕತೆಗಳಿಂದ ಕೂಡಿದ ಈ ಭಾಷಾ ಶೈಲಿಯು ಸುಗ್ರಾಹ್ಯವೂ ಸುಂದರವೂ ಆಗಿದೆ.

ವಚನ ಸಾಹಿತ್ಯದ ಶೈಲಿಯು ಆಂಗ್ಲ ಲೇಖಕರ [illegible] "ಕ್ರಿಸ್ತಾನುಕರಣ" ಎಂಬ ಅಪೂರ್ವ ಗ್ರಂಥದ ಶೈಲಿಯನ್ನು ಹೋಲುವಂತಿದೆ. ಎಂದು ವಿಮರ್ಶಕರು ಅಭಿಪ್ರಾಯಪಟ್ಟಿದ್ದಾರೆ.

ವಚನಗಳಲ್ಲಿಯ ಉಪಮೆ, ರೂಪಕ, ಧ್ವನಿ, ದೃಷ್ಟಾಂತ ಇತ್ಯಾದಿಗಳು ಅತ್ಯಂತ ರಸವತ್ತಾದವು, ಪ್ರತಿಮೆ, ಬೆಡಗು ಸಂಕೇತಗಳು ಅರ್ಥಪೂರ್ಣವಾಗಿದೆ. ಜನಾಂಗಕ್ಕೆ ಪರಿಚಿತವಾದ ಪ್ರಾಣಿ ಪಶುಪಕ್ಷಿಗಳಿಂದ ಜೀವನವನ್ನೇ ಭಾವವನ್ನು ವಿವರಿಸುವ ಶಿವ



ಶರಣರ ಕಲೆ ಅಗಾಧವಾದುದು. ಇದರಿಂದಾಗಿ ವಚನ ಸಾಹಿತ್ಯವು ಉತ್ತಮ ಸಾಹಿತ್ಯವಾಗಿದೆ. ನಾವು ಈ ಸಾಹಿತ್ಯವನ್ನು ದಾರ್ಶನಿಕ ಸಾಹಿತ್ಯ (Philosophical Poetry) ಎಂದು ಕರೆಯಬಹುದಾಗಿದೆ.

ಎಚ್. ದೇವಿರಪ್ಪನವರು ವಚನಗಳ ಉಗಮವನ್ನು ಕುರಿತು ಈ ರೀತಿ ಬರೆದಿದ್ದಾರೆ. ಬಹುಪ್ರಾಚೀನ ಕಾಲದಿಂದಲೂ ರಾಜ ಮಹಾರಾಜರುಗಳ ಬಿರುದಾವಳಿಯನ್ನು ವಂದಿ ಮಾಗಧರು ಹೊಗಳುವ ಸಂಪ್ರದಾಯವಿತ್ತು. ದೇವರೊ ಭೂತವೂ ಮೈದುಂಬಿದವರು ಅಪ್ಪಣೆ ಕೊಡಿಸುವ ಪದ್ಧತಿ ಇಂದಿಗೂ ಉಂಟು. ಕಾಣಿಕೆಗಳನ್ನು ವೀರಭದ್ರನ ವಡಬುಗಳನ್ನು ಹೇಳುವುದನ್ನು ನಾವು ನೋಡಿದ್ದೇವೆ. ಈ ಬಿರುದಾವಳಿ ಅಪ್ಪಣೆ ಕಾರಣಿಕ ಮತ್ತು ಅಂಗವೀರರ ವಡಬುಗಳ ಮಾತಿನ ಶೈಲಿ ಒಂದು ಬಗೆಯಲ್ಲಿ ಛಂದೋಲಯಬದ್ಧವಾಗಿರುತ್ತದೆ. ಅರ್ಥಕ್ಕನುಗುಣವಾಗಿ ಅವುಗಳ ಯತಿ ಶೈಲಿಯು ಜನತೆಯ ಮನವನ್ನು ಬಹು ಸುಲಭವಾಗಿ ಒಲಿಸಿಕೊಳ್ಳುವುದೆಂಬುದನ್ನು ಕಂಡುಕೊಂಡು ವಚನಕಾರರು ಇದನ್ನೆ ಮತ್ತಷ್ಟು ಪರಿಷ್ಕರಿಸಿಕೊಂಡು ವಚನಗಳನ್ನು ನುಡಿಯಲು ಆರಂಭಿಸಿದರೆಂದು ತೋರುವುದು. ವಚನಗಳ ಉಗಮವು ಇನ್ನಾವ ಪ್ರಬಲ ಪ್ರಮಾಣ ಇಲ್ಲದಿರುವಾಗ ಹೀಗೆಯೇ ಆಗಿರಬೇಕೆಂದು ತಿಳಿಯಬೇಕಾಗುತ್ತದೆ. ದಾಸಿಮಯ್ಯನ ವಚನಗಳನ್ನು ಮುಖ್ಯವಾಗಿ ಪುರಾತನ (ಪುರಂತರು ಲಿಂಗವೀರರು) ವಡಬು (ಖಡ್ಗ) ಗಳನ್ನು ಹೇಳುವಂತೆ ಲಯಬದ್ಧ ಶೈಲಿಯಲ್ಲಿ ಹೇಳುವುದು ಅಥವಾ ಓದುವುದು ಸರಿಯಾದ ದಾಟಿ ಎಂದಿದ್ದಾರೆ. ಕನ್ನಡ ಭಾಷೆಯು ಜೀವ ಜೀವಾಳವನ್ನು ಅರಿತು ಬಳಸಿ ಅದರ ಭಂಡಾರವನ್ನು ಸಂಪೂರ್ಣವಾಗಿ ಕೊಳ್ಳೆ ಹೊಡೆದವರು ವಚನಕಾರರು.

ಬಸವಾದಿ ಪ್ರಮಥರು ಆದ್ಯರ ವಚನವೆಂದು ಭಕ್ತಿಯಿಂದ ಕೊಂಡಾಡಿರುವುದು. ಈ ಆದ್ಯರ ವಚನ ಸಾಹಿತ್ಯವು ಕ್ರಿ.ಶ. 9-10 ನೇ ಶತಮಾನದಷ್ಟು ಹಿಂದಿನದು. ಈಗ ನಮಗೆ ಉಪಲಬ್ಧವಿರುವ ಎಷ್ಟೋ ವಚನಗಳು ಪಂಪನ ಸಾಹಿತ್ಯಕ್ಕಿಂತ ಪ್ರಾಚೀನವೆಂದಾಗ ಯಾರಾದರು ಹುಸಿ ನಗುವನ್ನು ನಕ್ಕರೆ ಅವರಿಗೆ ನವನವೋನ್ಮೇಷಿತ ಸತ್ಯ ವಿಚಾರಗಳನ್ನು ಸ್ವಾಗತಿಸುವ ಪ್ರಗತಿಪರ ದೃಷ್ಟಿಯಿಲ್ಲವೆನ್ನಬೇಕಾಗುವುದು ಎಂದಿದ್ದಾರೆ

ವಚನ ಸಾಹಿತ್ಯ ಎಂಬ ಪದ್ಯವು ಬಹು ವಿಶಾಲಾರ್ಥವನ್ನು ಪಡೆದ ಪದವಾಗಿದ್ದು ಅದು ಪದ್ಯ, ಗದ್ಯ ಗೀತೆ, ಹಾಡು ಮತ್ತು ವಚನ ಇವೆಲ್ಲವುಗಳಿಗೂ ಅನ್ವಯವಾಗುತ್ತದೆ. ಆದ್ದರಿಂದ ಅದು ಕನ್ನಡ ಸಾಹಿತ್ಯದ ವಿಶೇಷ ರೂಪವೆಂದು ಹೇಳಬಹುದಾಗಿದೆ.

ಬಹುಕಾಲದಿಂದಲೂ ಪಂಡಿತರ ತುತ್ತಾಗಿದ್ದ ವಿಶಿಷ್ಟ ವರ್ಗದವರ ಸೊತ್ತಾಗಿದ್ದ ರಾಜಲಕ್ಷ್ಮಿಯ ತೊತ್ತಾಗಿದ್ದ ಸರಸ್ವತಿಯ ಸಂಸ್ಕೃತ ಭಂಡಾರವನ್ನು ಕಡೆಗಣಿಸಿ

ತಮ್ಮ ಅನುಭವದ ಕಮ್ಮಟದಲ್ಲಿಯೇ ಅಚ್ಚೊತ್ತಿದ ವಚನ ಸಾಣ್ಯಗಳನ್ನು ಜನ ಸಾಮಾನ್ಯರಲ್ಲೆಲ್ಲ. ಸಲ್ಲುವಂತೆ ಹರಡಿಸಿದವರು ವಚನಕಾರರು. ದೇವವಾಣಿ ಜನವಾಣಿ ಯಾಗುವುದು ಅಸಾಧ್ಯವಾದಾಗ ಜನವಾಣಿಯನ್ನೇ ದೇವವಾಣಿಯ ಮಟ್ಟಕ್ಕೇರಿಸಿದ ಪವಾಡ ವೀರಶೈವ ವಚನಕಾರರದು.

ವಚನ ಸಾಹಿತ್ಯ ವೀರಶೈವ ಧರ್ಮದಂತೆ ಸ್ವತಂತ್ರ ಮೂಲವಾಗಿದ್ದು ಇತರ ಸಾಹಿತ್ಯಗಳ ಪ್ರಭಾವವನ್ನು ತನ್ನ ವಿಚಾರಧಾರೆಗೆ ಮತ್ತು ಅಭಿವ್ಯಕ್ತಿ ಮಾರ್ಗಕ್ಕೆ ಅನುಗುಣವಾಗಿರುವಷ್ಟನ್ನು ಸ್ವೀಕರಿಸಿದೆ.

ಆಧ್ಯಾತ್ಮಿಕ ಸಾಧಕರು ಮತ್ತು ಅನುಭಾವಿಗಳು ಅನುಭವ ಮಂಟಪದಲ್ಲಿ ಸೇರಿಆತ್ಮ ವಿಕಾಸಕ್ಕಾಗಿ ಮುಕ್ತ ಮನದಿಂದ ಭಾವಗೀತಾತ್ಮಕ ರೂಪ, ಲಯ, ಮತ್ತು ಶೈಲಿಗಳಲ್ಲಿ ಸಂಭಾಷಣೆಗಳನ್ನು ನಡೆಸಿ ವಚನ ಸಾಹಿತ್ಯ ನಿರ್ಮ್ಮಾಣ ಮಾಡಿದ್ದು ಕನ್ನಡ ನಾಡಿನ ಲ್ಲಿಯೇ ಎಂದು ಹೇಳಿದರೆ ಹುಸಿ ಹೆಮ್ಮೆಯ ಮಾತಲ್ಲ ದೇವರ ದಾಸಿಮಯ್ಯನ ಕಾಲದಲ್ಲಿ ಈ ಸೂಳ್ನುಡಿಯ ಸಭೆಗಳ ಸುಳಿವು ನಮಗೆ ದೊರೆಯುತ್ತದೆ. ಇದು ಬೆಳೆಯುತ್ತಾ ಹೋಗಿ ಬಸವ ಅಲ್ಲಮರ ಕಾಲದಲ್ಲಿ ದೊಡ್ಡ ದೊಡ್ಡ ಶಿವಾನುಭವ ಗೋಷ್ಠಿಯಾಗಿ ಪರಿಣಮಿಸಿತು.

ತಮ್ಮ ವೈಯಕ್ತಿಕ ಜೀವನದಲ್ಲಿ ಮತ್ತು ಸಾಮಾಜಿಕ ಜೀವನದಲ್ಲಿ ಎದುರು ಬಂದ ಸಮಸ್ಯೆಗಳನ್ನು ಬಗೆಹರಿಸಿಕೊಂಡು ಮುಂದುವರೆಯಬೇಕಾಗಿದ್ದ ಪರಿಸ್ಥಿತಿ ಅವರದ್ದು. ಜೀವನದ ಬಗ್ಗೆ ಅವರು ತಿಳಿದ ನಿಲುವು ವಿಶಿಷ್ಟವಾದದ್ದು. ಆದ್ದರಿಂದಲೇ ಆ ನಿಲುವನ್ನು ತಿಳಿಸಲು ವಿಶಿಷ್ಟ ಮಾಧ್ಯಮವನ್ನಾಗಿ ವಚನವನ್ನು. ಮಾಡಿಕೊಂಡರು ವಚನಕಾರರು ಎಲ್ಲ ರೀತಿಯ ವಚನಗಳನ್ನು ರಚನೆ ಮಾಡಿದರು ಸರಿಕಾಣದ ಸಮಾಜ ವನ್ನು ಟೀಕಿಸಿದರು, ವಿಡಂಬಿಸಿದರು, ವಿಮರ್ಶಿಸಿದರು, ಅಲ್ಲದೆ ತಮ್ಮ ಅನುಭವಗಳನ್ನು ನೀತಿ ಬೋಧನೆಯನ್ನು ವಚನಗಳ ಮೂಲಕ ತಿಳಿಸಿದರು. ಹೀಗಾಗಿ ವಚನ ಎರಡು ರೀತಿಯ ಉಪಯೋಗವಾಯಿತು. ಒಂದು ವಿಷಯ ಪ್ರತಿಪಾದನೆಗಾಗಿ ಎರಡು ಅನು- ಭವಗಳ ಅಭಿವ್ಯಕ್ತಿಗಾಗಿ. ಅನುಭವದ ಸಮರ್ಥ ಅಭಿವ್ಯಕ್ತಿಯಾದಲ್ಲೆಲ್ಲಾ ಶ್ರೇಷ್ಠ ಕಲ್ವ್ಯ- ವಾಯಿತು. ಸಮಾಜದ ಜೀವನ ಕ್ರಮದಲ್ಲಾದ ಬದಲಾವಣೆಗಳೆ ಸಾಹಿತ್ಯದಲ್ಲಿ ಹೊಸ ಅಭಿವ್ಯಕ್ತಿಯ ರೀತಿಗಳಿಗೆ ಕಾರಣವಾಗುತ್ತದೆ ಎನ್ನುವುದಕ್ಕೆ ವಚನ ಸಾಹಿತ್ಯ ಅತ್ಯು ತ್ತಮ ಉದಾಹರಣೆಯಾಗಿದೆ.

ವಚನ ಅನುಭವದ ಗಾಢವು ಸೂಕ್ಷ್ಮವು ಆಗಿರುವಂತೆ ಎತ್ತಿ ಸಹಜ ಸ್ಫೂರ್ತವು ಅಲಂಕಾರ ರಮ್ಯವು ಆಗಿರುತ್ತದೆ. ಸಾಲುಸಾಲಾದ ಲೌಕಿಕ ದೃಷ್ಟಾಂತಗಳಿಂದಲೂ ಗಾದೆ ಮಾತು ಒಳ್ನುನುಡಿಗಳಿಂದಲೂ ಸೂಕ್ಷ್ಮ ಅನುಭವವನ್ನು ತತ್ವವನ್ನು ಸಾಮಾ ನ್ಯರ ಮನಸ್ಸಿಗೆ ಮುಟ್ಟಿಸುವ ಸರಣಿ ಅವುಗಳಲ್ಲಿರುತ್ತದೆ. ಇಷ್ಟದೇವತೆ ಎಂದಿರು



ಭಕ್ತಿನಮ್ರನಾಗಿ ತನ್ನದೆನ್ನೆಲ್ಲ ತೋಡಿಕೊಳ್ಳುವ ಒಂದು ಭಾವಾವೇಶವು ಕೆಲವದರಲ್ಲಿದ್ದರೆ ಸಮಾಜ ದೋಷಗಳ ಖಂಡಿತವಾದ ವಿಮರ್ಶೆ ಕೆಲವದರಲ್ಲಿರುತ್ತದೆ. ಸ್ವಂತದ ಕಾರ್ಯಗಳಿಗೆ ಅನುಗುಣವಾದ ಹೋಲಿಕೆಗಳಿಂದ ಕೆಲವು ವಚನಕಾರರು ಪಾರಮಾರ್ಥಿಕ ವಿವರಣೆಯನ್ನು ಮಾಡಿದ್ದಾರೆ.

ವಚನ ಸಾಹಿತ್ಯ ಹನ್ನೊಂದನೇ ಶತಮಾನದಲ್ಲಿ ಉಗಮವಾಗಿ ಹನ್ನೆರಡನೇ ಶತಮಾನದಲ್ಲಿ ಮಹಾ ಪ್ರವಾಹವಾಗಿ, ಆ ಮೇಲೆ ಹರಿದರಿದು ಹದಿನೈದು - ಹದಿನಾರರಲ್ಲಿ ಮತ್ತೆ ನೊರೆಯುಕ್ಕಿ ಹದಿನೇಳರವರೆಗೆ ತೆಳುದೊರೆಯಾಗಿ ಮುಂದು ವರಿಯಿತು ಎಂದು ಹೇಳಬಹುದು.

ನಿರ್ಭರವಾದ ಭಾವಾನುಭವ ಚಿತ್ತ ವೃತ್ತಿಯು ಉಕ್ಕಿರುತ್ತದೆ. ಇದಕ್ಕೆ ಹೊಂದಿ ಕೊಂಡು ಪ್ರತಿಭೆಯು, ಕಲ್ಪನೆಯ ವಿಲಾಸ ವಿರುತ್ತದೆ. ಹೀಗೆ ಹೃದಯದ ಆಳದಿಂದ ಹೊಮ್ಮಿ ಪ್ರತಿಭೆಯಲ್ಲಿ ಹೊಮ್ಮಿ ಈ ವಚನ ಹೊರ ಬರುತ್ತದೆ. ಸಹೃದಯನ ಹೃದ ಯಕ್ಕೆ ತಟ್ಟಿ ಅಲ್ಲಿ ಮತ್ತೆ ಭಾವವನ್ನು ಉಕ್ಕಿಸುವುದು ಎಂದಿದ್ದಾರೆ-

ಹೀಗೆ ವಚನಗಳ ಉಗಮದ ಬಗ್ಗೆ ಹಲವಾರು ವಿದ್ವಾಂಸರು ಹೇಳಿದ ಹೇಳಿಕೆ ಗಳಿಂದ ಇವುಗಳ ಉಗಮ ನಿಖರವಾಗಿ, ಸ್ಪಷ್ಟವಾಗಿ, ನಿರ್ದಿಷ್ಟವಾಗಿ ತಿಳಿಸಲಿಲ್ಲ. ಕೇವಲ ತಮಗೆ ಸಿಕ್ಕ ಆಧಾರಗಳ ಮೇಲಿಂದ ತಮ್ಮ ಅನಿಸಿಕೆಯನ್ನು ಮಂಡಿಸಿದ್ದಾರೆ. ವಚನಕಾರರು ತಮ್ಮ ಅಪಾರವಾದ ಅನುಭವ ಹಾಗೂ ಹಿಂದೆಂದೂ ಮತ್ತು ಸಮ ಕಾಲೀನ ಸಾಹಿತ್ಯದಲ್ಲಿ ಕಾಣದೆ ಇದ್ದ ವಚನ ಸಾಹಿತ್ಯ ಹನ್ನೆರಡನೇ ಶತಮಾನದಲ್ಲಿ ಹುಟ್ಟಿ ಬಂದುದು ಕನ್ನಡಿಗರ ಅಮೂಲ್ಯ ಸಾಹಿತ್ಯವಾಗಿದೆ.

ಮಂಡೆ ಮಾಸಿದರೆ ಮಜ್ಜನವ ಮಾಡೆಂಬರು
ವಸ್ತ್ರಮಾಸಿದರೆ ಮಡಿವಾಳಗಿಕ್ಕೆಂಬರು
ಮನದ ಮೈಲಿಗೆಯ ಕಳೆವೊಡೆ
ಕೂಡಲ ಚನ್ನಸಂಗನ ಶರಣರೊಡನೆ
ಅನುಭಾವವ ಮಾಡೆಂಬರು ಚನ್ನಬಸವಣ್ಣ

# ಕ್ಷೇತ್ರವಾರ್ತೆ

*—ಹೆಚ್. ಬಿ. ಗಂಗಾಧರಯ್ಯ*

## 42 ನೇ ಸರ್ವಸದಸ್ಯರ ಮಹಾಧಿವೇಶನ

ಶ್ರೀ ಮಠದ ಹಳೆ ವಿದ್ಯಾರ್ಥಿ ಸಂಘದ 42 ನೇ ಸರ್ವಸದಸ್ಯರ ಸಭೆ 20 ನೇ ಅಕ್ಟೋಬರ್ 1996 ಭಾನುವಾರ ತ್ರಿವಿಧ ದಾಸೋಹ ಮೂರ್ತಿಗಳಾದ ಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನಿಧ್ಯದಲ್ಲಿ ಸಮಾವೇಶವಾಗಿತ್ತು. ರಾಜ್ಯದ ನಾನಾ ಭಾಗಗ ಳಿಂದ ಎರಡು ಸಾವಿರ ಮಂದಿ ಆಗಮಿಸಿದ್ದರು.

ಸಂಘ ನಡೆದು ಬಂದ ದಾರಿ ಮತ್ತು ಅದರ ಚಟುವಟಿಕೆಗಳಿಗೆ ಸಂಬಂಧಿಸಿ ದಂತೆ ವರದಿಯನ್ನು ಹೆಚ್. ಬಿ. ಗಂಗಾಧರಯ್ಯ ಓದಿದರು.

ಹ. ವಿ. ಸಂಘದ ಮೂಲಕ ಶ್ರೀ ಶ್ರೀಗಳವರ ವಜ್ರಮಹೋತ್ಸವ ನಿಧಿಗೆ ಸಂಗ್ರ
ಹವಾದ ಮೊತ್ತದ ಬಗ್ಗೆ ಶ್ರೀ ಕೆ. ಹೆಚ್. ಶಿವರುದ್ರಯ್ಯನವರು ಮಾಹಿತಿ ನೀಡಿದರು.
ಒಟ್ಟು 43 ಲಕ್ಷ ರೂಗಳು ಈವರೆವಿಗೆ ಸಂಗ್ರಹವಾಗಿದೆ. ಇದರಲ್ಲಿ 27 ಲಕ್ಷ ರೂಗಳು
ಹಳೆಯ ವಿದ್ಯಾರ್ಥಿಗಳು ನೀಡಿದ್ದರೆ 16 ಲಕ್ಷ ರೂಗಳು ಗ್ರಾಮಾಂತರ ಪ್ರದೇಶಗಳಿಂದ
ಸಂಗ್ರಹವಾಗಿದೆ. ಇದಲ್ಲದೆ 3047 ಚೀಲ ರಾಗಿ, 2525 ಚೀಲ ಭತ್ತ, 80 ಚೀಲ
ಅಕ್ಕಿ ಬೆಲ್ಲ, ಹುಣಸೆಹಣ್ಣು, ಮೆಣಸಿನಕಾಯಿ, ತೆಂಗಿನಕಾಯಿ ಮತ್ತು ಕಾಳುಕಡ್ಡಿಗ
ಳನ್ನು ಹೇರಳವಾಗಿ ರೈತಾಪಿ ಬಂಧುಗಳು ನೀಡಿರುವುದನ್ನು ಸ್ಮರಿಸಬಹುದು.

ಬೆಂಗಳೂರು ನಗರದಲ್ಲಿ ನಮ್ಮ ಸಂಘದ ಸಂಚಾಲಕರಾದ ಶ್ರೀ ಎಂ. ಶಿವಣ್ಣ
ಮತ್ತು ಶ್ರೀ ಟಿ. ಬಿ. ವಿರೂಪಾಕ್ಷಯ್ಯನವರು ಆಪ್ತ ಸ್ನೇಹಿತರ ನೆರವಿನಿಂದ ಸಂಗ್ರ
ಹಿಸಿದ ಮೊತ್ತ 25 ಲಕ್ಷ ರೂಗಳು.

ಶ್ರೀಮಠದ ಆಡಳಿತಾಧಿಕಾರಿಗಳಾದ ಶ್ರೀ ಪುಟ್ಟಶಂಕರಯ್ಯನವರು ಮಠದ ವಿದ್ಯಾಸಂಸ್ಥೆಯ ನೌಕರರ ವರ್ಗದಿಂದ 40 ಲಕ್ಷ ರೂ.ಗಳು ಸಂಗ್ರಹವಾಗಿದೆ ಎಂದು ತಿಳಿಸಿದರು.

ಸಮಾರಂಭದಲ್ಲಿ ಉಪಸ್ಥಿತರಿದ್ದ ಶ್ರೀ ಶ್ರೀಗಳ ವಜ್ರಮಹೋತ್ಸವ ನಿಧಿ ಸಮಿತಿ
ಕಾರ್ಯಾಧ್ಯಕ್ಷರಾದ ಶ್ರೀ ಬಿ. ಎಸ್. ಮುದ್ದಪ್ಪನವರು ರಾಜ್ಯಮಟ್ಟದಲ್ಲಿ ನಿಧಿಗೆ
ಸಂಗ್ರವಾದ ಬಗ್ಗೆ ವಿವರಣೆ ನೀಡಿ ಮಾತನಾಡಿದರು.

ಈವರೆವಿಗೆ 3 ಕೋಟಿ 93 ಲಕ್ಷ ರೂಗಳು ನಿಧಿಗೆ ಸಂಗ್ರಹವಾಗಿ ಜಮಾ
ಆಗಿದೆ. ಈ ಮೊತ್ತದಲ್ಲಿ 3 ಕೋಟಿ 91 ಲಕ್ಷ ರೂ.ಗಳು ಖರ್ಚಾಗಿದೆ. ಒಟ್ಟು
6 ಕೋಟಿ ರೂ.ಗಳ ಯೋಜನೆ ಈ ಸ್ಮಾರಕ ಭವನಗಳಾಗಿವೆ. ಇವುಗಳ ಕಾರ್ಯ
ಮುಗಿಯಲು ಹಣದ ಅವಶ್ಯಕತೆ ಇದೆ. ಉಳಿದಿರುವ ಕೆಲಸಗಳಾದ ವಿದ್ಯುದ್ದೀಕರಣ

ನಿರ್ಮಲೀಕರಣ, ನೀರು ಸರಬರಾಜು, ಬಣ್ಣ ಹಚ್ಚುವಿಕೆ ಮತ್ತು ನಿರ್ವಹಣಾ ಹಾಗೂ ಮೇಲ್ವಿಚಾರಣೆಗಾಗಿ 1 ಕೋಟಿ ರೂ.ಗಳ ಬೇಡಿಕೆ ಇದೆ. ಪ್ರಸ್ತುತ ಹಣದ ಮುಗ್ಗಟ್ಟು ತೀವ್ರವಾಗಿದೆ. ಈ ಕೊರತೆಯನ್ನು ತುಂಬಲು ಶ್ರೀಮಠದಿಂದ 60 ಲಕ್ಷ ರೂಗಳನ್ನು ಮುಂಗಡವಾಗಿ ಪಡೆಯಲಾಗಿದೆ.

ಸಮಾರಂಭವು 1997 ಜನವರಿ ಕೊನೆಯ ವಾರ ಅಥವಾ ಮಾರ್ಚಿ ಮೊದಲ ವಾರದಲ್ಲಿ ಏರ್ಪಡಿಸಲು ನಿಯೋಜಿಸಲಾಗಿದೆ. ಲಭ್ಯವಿರುವ ಕಡಿಮೆ ಅವಧಿಯಲ್ಲಿ ಹಳೆಯ ವಿದ್ಯಾರ್ಥಿ ಸಂಘವು ಹೆಚ್ಚಿನ ಶ್ರಮವಹಿಸಿ ನಿಧಿ ಕೂಡಿಸುವಲ್ಲಿ ನೆರವಾಗಬೇಕೆಂದು ಕೋರಿದರು.

ರಾಜ್ಯದಾದ್ಯಂತ ಸಹಸ್ರ ಸಹಸ್ರ ಶ್ರೀ ಮಠದ ಹಳೆಯ ವಿದ್ಯಾರ್ಥಿಗಳು ವಿವಿಧ ಕ್ಷೇತ್ರಗಳಲ್ಲಿ ದುಡಿಮೆ ಮಾಡುತ್ತಿದ್ದಾರೆ. ಎಲ್ಲರೂ ತಮ್ಮ ಪಾಲಿನ ವಂತಿಕೆಗಳನ್ನು ನೀಡುವುದರ ಜೊತೆಗೆ ಒಬ್ಬಬ್ಬರೂ ಕನಿಷ್ಟ 5 ಸಹಸ್ರ ರೂ.ಗಳನ್ನು ಸಂಗ್ರಹಿಸಿ ಕೊಡಬೇಕೆಂದು ಮನವಿ ಮಾಡಿದರು.

ಶ್ರೀ ಶ್ರೀಗಳ ಸೇವೆ ಮತ್ತು ತ್ಯಾಗಕ್ಕೆ ವಿಶ್ವದಲ್ಲಿ ಸಾಟಿ ಇಲ್ಲ. ಶ್ರೀಗಂಧದ ಕೊರಡಿನಂತೆ 65 ವರ್ಷಗಳಿಂದ ತಮ್ಮ ದೇಹವನ್ನು ಶಿಕ್ಷಣದ ಮತ್ತು ಶ್ರೀಮಠದ ಸರ್ವತೋಮುಖ ಬೆಳವಣಿಗೆಗಾಗಿ ಸವೆಸುತ್ತಾ ಬಂದಿದ್ದಾರೆ. ಭಾರತೀಯ ಅಧ್ಯಾತ್ಮಿಕ ಸಂಸ್ಕೃತಿಯ ಸಾಕಾರ ಮೂರ್ತಿಗಳು. 90 ರ ಹರೆಯದಲ್ಲಿ ಅವರ ಕ್ರಿಯಾಶೀಲತೆ ಸಮಾಜ ಮತ್ತು ನಾಡಿಗೆ ಸ್ಫೂರ್ತಿಯ ಚಿಲುಮೆಯಾಗಿದೆ. ಜನಮನದಲ್ಲಿ ವಿಜೃಂಭಿಸುತ್ತಿದ್ದಾರೆ. ಕೇಳುವವರಿಲ್ಲದೆ ನಿಧಿಗೆ ಹಣದ ಮುಗ್ಗಟ್ಟು ಉಂಟಾಗಿದೆ. ನೀವುಗಳೆಲ್ಲರೂ ಈ ಬಗ್ಗೆ ಪ್ರಯತ್ನ ಶೀಲರಾದರೆ ಭವ್ಯ ದಿವ್ಯ ಸ್ಮಾರಕ ಯೋಜನೆಗೆ ಹಣ ಸಾಗರದಂತೆ ಸಂಗ್ರಹವಾಗುವುದೆಂದು ನಿವೇದಿಸಿಕೊಂಡರು.

ಸಮಾರಂಭಕ್ಕೆ ವಿಶೇಷ ಆಹ್ವಾನಿತರಾಗಿ ಆಗಮಿಸಿದ್ದ ಶ್ರೀ ಸಿದ್ಧಗಂಗಾ ಇನ್‌ಸ್ಟ್ಯೂಟ್ ಆಫ್ ಟೆಕ್ನಾಲಜಿ, ತುಮಕೂರು ತಾಂತ್ರಿಕ ನಿರ್ದೇಶಕರಾದ ಪ್ರೊ. ಜಿ. ಪರಮೇಶ್ವರಪ್ಪನವರು ಇಂಗ್ಲೆಂಡ್ ಮತ್ತು ಅಮೇರಿಕಾ ದೇಶಗಳಲ್ಲಿ ಶ್ರೀ ಶ್ರೀಗಳವರ ವಜ್ರ ಮಹೋತ್ಸವ ನಿಧಿಗೆ ಸಂಗ್ರಹಿಸಿದ ಬಗ್ಗೆ ಮಾತನಾಡಿದರು. ಶ್ರೀ ಶ್ರೀಗಳ ಆಶೀರ್ವಾದ ಪಡೆದು ನಾಲ್ಕು ತಿಂಗಳ ಕಾಲ ಹೊರದೇಶಗಳಲ್ಲಿ ನಮ್ಮ ನಾಡಿನ ನಾಗರೀಕರನ್ನು ಸಂಪರ್ಕಿಸಿ 30 ಲಕ್ಷ ರೂಗಳನ್ನು ಕೂಡಿಸಲಾಯಿತು. ಇದು ಸಾಧಾರಣದ ಕಾರ್ಯ ಮಾತ್ರ. ನಾವೆಲ್ಲರು ನಿಮಿತ್ತ ಮಾತ್ರರು. ಶ್ರೀಶ್ರೀಗಳ ಮಹಾನ್ ವ್ಯಕ್ತಿತ್ವ ಮತ್ತು ಸೇವಾ ಕಾರ್ಯಗಳು ಜಗತ್ತಿನಾದ್ಯಂತ ಸಾಗರವನ್ನು ಹೋಲುತ್ತವೆ. ಶ್ರೀ ಸಿದ್ಧಗಂಗಾ ಮಠದ ಕಾರ್ಯ ಚಟುವಟಿಕೆಗಳನ್ನು ಸಾಕ್ಷ್ಯಚಿತ್ರದಿಂದ ನೋಡಿ ಪ್ರಭಾವಿತರಾಗಿ ಉದಾರತೆಯಿಂದ ಹಣ ಕೊಡಲು ಮುಂದೆ ಬರುತ್ತಿದ್ದುದು ಹೃದಯಸ್ಪರ್ಶಿಯಾಗಿತ್ತು. ಶ್ರೀ ಮಠದಿಂದ ಬಂದಿರುವುದಾಗಿ ವಿದೇಶದಲ್ಲಿರುವ ನಮ್ಮವರು ಎಲ್ಲೆಲ್ಲೂ



ಪ್ರೀತಿ ವಿಶ್ವಾಸಗಳಿಂದ ಬರಮಾಡಿಕೊಂಡು ಉಪಚರಿಸಿ ನಿಧಿ ಸಂಗ್ರಹಣೆಗೆ ಪೂರ್ಣ ಸಹಕಾರ ಬೆಂಬಲವನ್ನು ನೀಡಿದರು ಎಂದು ಹೇಳಿದರು.

ಶ್ರೀ ಶ್ರೀಗಳಿಗೆ ಶ್ರೀ ಸಿದ್ಧಗಂಗಾಮಠದ ಸೇವಾ ಕಾರ್ಯಗಳಿಗೆ ಎಲ್ಲರೂ ಶ್ರದ್ಧಾ ಭಕ್ತಿಯಿಂದ ನೀಡುವವರಿದ್ದಾರೆ. ಆದರೆ ಜನತೆಯ ಸಂಪರ್ಕ ಬೆಳೆಸಿ ಕೇಳುವರು ಬೇಕಾಗಿದೆ. ಈ ಕೆಲಸವನ್ನು ಶ್ರೀ ಮಠದ ಎಲ್ಲ ಹಳೆಯ ವಿದ್ಯಾರ್ಥಿಗಳು ತಮ್ಮ ಜೀವಿತ ಕಾಲದಲ್ಲಿ ಆಶ್ರಯ ನೀಡಿದ ಮಾತೃ ಸಮಾನವಾದ ಸಂಸ್ಥೆಗೆ ನೆರವಾಗಲು ಪಣ ತೊಡಬೇಕೆಂದು ಒತ್ತಿ ಹೇಳಿದರು. ನಿಧಿ ಸಂಗ್ರಹಿಸಿದ ತಮ್ಮ ಪ್ರದೇಶಗಳಲ್ಲಿ ಆದ ಅನುಭವಗಳನ್ನು ಇವರುಗಳು ಸಭೆಗೆ ಪರಿಚಯಿಸಿ ಎಲ್ಲ ಹಳೆಯ ವಿದ್ಯಾರ್ಥಿಗಳು ಸಕ್ರಿಯವಾಗಿ ಈ ಪುಣ್ಯ ಸ್ಮಾರಕ ಭವನಗಳು ಪೂರ್ಣವಾಗಲು ನೆರವಾಗಬೇಕೆಂದು ವಿನಂತಿಸಿದರು. ಅವರುಗಳೆಂದರೆ

1 ಶ್ರೀ ವೀರಪ್ಪದೇವರು, ಬೆಂಗಳೂರು. 20 ಲಕ್ಷ ರೂಗಳನ್ನು ಸಂಗ್ರಹಿಸಿ ದಾಖಲೆ ಸ್ಥಾಪಿಸಿದ್ದಾರೆ. ಪ್ರತಿವರ್ಷ ತಮ್ಮ ಆದಾಯದಲ್ಲಿ 10 ಸಾವಿರ ರೂಗಳನ್ನು ನೀಡುವುದಾಗಿ ವಾಗ್ದಾನ ಮಾಡಿದರು.

2 ಶ್ರೀ ರೇಣುಕಾರಾಧ್ಯರು, ಶಿಕ್ಷಕರು, ದಾಸೇನಹಳ್ಳಿ, ನೆಲಮಂಗಲ ತಾ|| ಹೊನ್ನಾರಾಯನಹಳ್ಳಿ ಶ್ರೀ ಕೆಂಪಣ್ಣನವರ ನೇತೃತ್ವದಲ್ಲಿ 6 ಲಕ್ಷ ರೂಗಳ ನಿಧಿ ಸಂಗ್ರಹಣೆ.

3 ಶ್ರೀ ಟಿ. ಗುರುದೇವಪ್ಪ ನಿವೃತ್ತ ಶಿಕ್ಷಕರು ಹಿರೇ ಬೆಳಗುಲ್ಲಿ, ಹಾಸನ ಜಿಲ್ಲೆ.

4 ಶ್ರೀ ಸಾಸಲು ನಂಜುಂಡಪ್ಪ, ತಿಪಟೂರು, ತುಮಕೂರು ಜಿಲ್ಲೆ.

5 ಶ್ರೀ ಗಂಗರೇವಣ್ಣ, ಗೊಲ್ಲಹಳ್ಳಿ, ಮಾಗಡಿ ತಾ|| ಬೆಂಗಳೂರು ಜಿಲ್ಲೆ

6 ಶ್ರೀ ಹೆಚ್.ಬಿ. ನಂಜುಂಡಯ್ಯ, ಹೊನಸಗೆರೆ, ತುಮಕೂರು ತಾ||.

ಹಳೆಯ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ನಡೆಯುತ್ತಿರುವ

1 ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದ 1996 ನೇ ಸಾಲಿನ ಜಮಾಖರ್ಚಿನ ಪರಿಶೋಧನಾಲೆಕ್ಕವನ್ನು ಕಾರ್ಯದರ್ಶಿ ಶ್ರೀ ಬಿ. ಗಂಗಾಧರಯ್ಯ ಮಂಡಿಸಿದರು.

2 "ಸಿದ್ಧಗಂಗಾ" ಮಾಸ ಪತ್ರಿಕೆಯ 1995-96 ನೇ ಸಾಲಿನ ಪರಿಶೋಧಿಸಿದ ಜಮಾ ಖರ್ಚಿನ ಲೆಕ್ಕವನ್ನು ಪ್ರಕಾಶಕ ಹೆಚ್ ಬಿ. ಗಂಗಾಧರಯ್ಯ ಮಂಡಿಸಿದರು.

ಸಭೆ ಸರ್ವಾನುಮತದಿಂದ ಅನುಮೋದನೆ ನೀಡಿತು.

ಕಿರಿಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು : ಹ.ವಿ. ಸಂಘಕ್ಕೆ ಯಶಸ್ಸು ಕೋರಿ ಹಾರೈಸಿದರು. 1930 ರಿಂದ ಶ್ರೀ ಶ್ರೀಗಳು ಶ್ರೀ ಮಠವನ್ನು ರಚನಾತ್ಮಕವಾಗಿ ಬೆಳಸಿ ನಡೆಸಿ ಕೊಂಡು ಬರುತ್ತಿದ್ದಾರೆ. ಮಾತೃ ಪಾಲನೆಗೆ ಮಿಗಿಲಾದ ಸೇವೆ ಲಕ್ಷೋಪಲಕ್ಷ ವಿದ್ಯಾರ್ಥಿಗಳಿಗೆ ಇಲ್ಲಿ ಲಭ್ಯವಾಗಿದೆ. ಹಳೆಯ ವಿದ್ಯಾರ್ಥಿ ಸಂಘದ ಶಕ್ತಿ ಶ್ರೀಮಠದ ಅಮೂಲ್ಯ ಸಂಪತ್ತು. ಸಂಘದ ಶಕ್ತಿ ಚಾಲನೆಗೆ ಸಕಾಲ. ಎಲ್ಲರೂ ಭಾಗಿಗಳಾಗಬೇಕೆಂದು ನುಡಿದರು.

**ಶ್ರೀ ಶ್ರೀಗಳವರ ಆಶೀರ್ವಚನ:**

ಹ. ವಿ. ಸಂಘದ ಸಭೆ ಸಮಾವೇಶ ಸಂಪ್ರದಾಯವಾಗಿದೆ ಶ್ರೀಮಠದ ಎಲ್ಲಾ ಕಾರ್ಯ-ಚಟುವಟಿಕೆಗಳಲ್ಲಿ ತುಂಬು ಸಹಕಾರ ಮತ್ತು ಬೆಂಬಲವನ್ನು ನೀಡುತ್ತಾ ಬಂದಿರುವುದು ಶ್ಲಾಘನೀಯವಾಗಿದೆ.

ವಜ್ರಮಹೋತ್ಸವ ಆಚರಣೆಗೆ ಆಸಕ್ತಿ ಇಲ್ಲದೆ ಒಪ್ಪಿಗೆ ನೀಡಲಿಲ್ಲ. ವಿದ್ಯಾರ್ಥಿಗಳ ಸಮುದಾಯಕ್ಕೆ ಉಪಯುಕ್ತವಾದ ಸಾರ್ಥಕ ಕೆಲಸವಾದರೆ ಆಚರಣೆಗೆ ಮಹತ್ವ ಉಂಟು ಎಂದು ಹೇಳಿದೆ ಆಗ ಶ್ರೀ ಮಠದ ಭಕ್ತಾಭಿಮಾನಿಗಳು ಹಿತೈಷಿಗಳು ಮತ್ತು ಹಳೆಯ ವಿದ್ಯಾರ್ಥಿಗಳು ಸಭೆ ಸೇರಿ ಸ್ಮಾರಕಭವನಗಳ ಯೋಜನೆ ರೂಪಿಸಿದರು. ತುಮಕೂರು ಶ್ರೀ ಸಿದ್ಧಾರ್ಥ ಸಂಸ್ಥೆಯ ಸ್ಥಾಪಕರಾದ ದಿವಂಗತ ಹೆಚ್. ಎಂ. ಗಂಗಾಧರಯ್ಯನವರು ಈ ಬಗ್ಗೆ ಉತ್ತಮ ಸಲಹೆ ನೀಡಿದರು.
ನಿಧಿ ಸಂಗ್ರಹ ಜವಾಬ್ದಾರಿ.

ಶ್ರದ್ಧೆ-ನಿಷ್ಠೆಯಿಂದ ನಾಡಿನ ಜನತೆ ಉದಾರವಾಗಿ ನೀಡುತ್ತಿದ್ದಾರೆ. ಜೊತೆಗೆ ಹಳೆಯ ವಿದ್ಯಾರ್ಥಿಗಳು ಈ ಕಾರ್ಯದಲ್ಲಿ ಭಾಗಿಗಳಾಗುತ್ತಿದ್ದಾರೆ.

ಪ್ರಾಮಾಣಿಕ ಸೇವಾ ಮನೋಭಾವದಿಂದ ವಜ್ರಮಹೋತ್ಸವ ಸಮಿತಿಯ ಪದಾಧಿಕಾರಿಗಳಾದ ಡಾ. ಎಂ. ಸಿ. ಮೋದಿ, ಶ್ರೀ ಬಿ. ಎಸ್. ಮುದ್ದಪ್ಪ, ಶ್ರೀ ಎಸ್. ಎಸ್. ಹಸಬಿ, ಶ್ರೀ ನಾಗರಾಜಯ್ಯ, ಮತ್ತು ಶ್ರೀ ಕುಲಕರ್ಣಿಯವರು ವಿಶೇಷವಾಗಿ ಶ್ರಮಿಸುತ್ತಿದ್ದಾರೆ. ಒಂದು ಪೈಸೆ ಲೋಪವಿಲ್ಲದೆ ಸ್ಮಾರಕ ಕಟ್ಟಡಗಳ ಗುಣಮಟ್ಟವನ್ನು ಸಂರಕ್ಷಿಸಿದ್ದಾರೆ. ಅವರ ಪಾತ್ರ ಮತ್ತು ಸೇವೆ ಎಲ್ಲಾ ಕಾಲಕ್ಕೂ ಪ್ರಶಂಸನೀಯ.

ವಜ್ರಮಹೋತ್ಸವ ಯಶಸ್ಸಿಗೆ ಹಳೆಯ ವಿದ್ಯಾರ್ಥಿಗಳ ಜವಾಬ್ದಾರಿ ಗುರುತರವಾದುದು. 1997 ಜಾತ್ರೆಗೆ ಮುಂಚೆ/ನಂತರ ಸಮಾರಂಭ ನಡೆಯುವ ಸಂಭವವಿದೆ. ಇದು ಯಶಸ್ವಿಯಾಗಬೇಕು. ಸ್ಫೂರ್ತಿ ಉಂಟಾಗುವಂತೆ ಎಲ್ಲರೂ ಸಹಕರಿಸಿ ಆದರ್ಶವಾದ ರೀತಿಯಲ್ಲಿ ಪೂರ್ಣ ಸಹಕಾರ ನೀಡಬೇಕಾಗಿದೆ ಎಂದು ಹೇಳಿದರು.

ಸಂಘ ನಿರ್ವಹಿಸುತ್ತಿರುವ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶದ ಹಾಗೂ "ಸಿದ್ಧಗಂಗಾ" ಮಾಸ ಪತ್ರಿಕೆ ಪ್ರಕಟಣೆ ನಿರಂತರವಾಗಿ ಮುನ್ನಡೆಯುತ್ತಿರುವುದು ಸಂತೋಷವನ್ನುಂಟು ಮಾಡಿದೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ಸಂಪ್ರದಾಯದಂತೆ ಆದಿನದ ಅದೃಷ್ಟವಂತರಾಗಿ ಶ್ರೀ ಗುರುಪ್ರಕಾಶ್, ಪ್ರಾಂಶುಪಾಲರು, ಸಿದ್ಧಾರ್ಥಕಾಲೇಜ್, ತುಮಕೂರು ಮತ್ತು ಶ್ರೀ ಟಿ. ಗುರುದೇವಪ್ಪ, ನಿವೃತ್ತ ಶಿಕ್ಷಕರು, ಹಿರೆಬೆಳಗುಲಿ, ಹೆಚ್. ಎನ್. ಪುರ ತಾ|| ಹಾಸನ ಜಿಲ್ಲೆ, ಇವರು ಆಯ್ಕೆಯಾಗಿ ಶ್ರೀ ಶ್ರೀಗಳವರ ಫೋಟೊಗಳನ್ನು ಪಡೆದರು.

ಪ್ರಾರಂಭದಲ್ಲಿ ಸಂಘದ ಪ್ರಧಾನ ಕಾರ್ಯದರ್ಶಿ ಶ್ರೀ ಎಂ.ಎನ್. ಚನ್ನಬಸಪ್ಪ ಸ್ವಾಗತಿಸಿದರು. ಶ್ರೀ ಪಿ.ಎನ್. ಚಂದ್ರಶೇಖರಯ್ಯ ವಂದನೆಸಲ್ಲಿಸಿದರು. ಶ್ರೀ ಕೆ.ಹೆಚ್. ಶಿವರುದ್ರಯ್ಯ ಕಾರ್ಯಕ್ರಮ ನಿರೂಪಿಸಿದರು.

## ಚಂದನದ ಬೀಡು-ಚೆಲುವ ಕನ್ನಡನಾಡು

ಕನ್ನಡನಾಡು ಕಲೆ, ಸಂಸ್ಕೃತಿ, ಸಾಹಿತ್ಯಗಳ ತವರಾಗಿ ಮೆರೆದಿದೆ. ಬೆಂಗಳೂರು ನಗರವನ್ನು 459 ವರ್ಷಗಳ ಹಿಂದೆ ಕಟ್ಟಿದ ಮಾಗಡಿ ಕೆಂಪೇ-ಗೌಡ ಬ್ರಿಟಿಷರ ವಿರುದ್ಧ ಹೋರಾಡಿ ಮಡಿದ. ಮೈಸೂರು ಹುಲಿ ಟಿಪ್ಪುಸುಲ್ತಾನ ಮತ್ತು ಕಿತ್ತೂರುರಾಣಿ ಚೆನ್ನಮ್ಮ ನಮ್ಮ ನಾಡಿಗೆ ಚಿರಕಾಲ ತಿಲಕಪ್ರಾಯರು.

ಹರಿದು ಹಂಚಿ ಹೋಗಿದ್ದ ಕನ್ನಡನಾಡಿನ ಏಕೀಕರಣಕ್ಕಾಗಿ ಬೆನಗಲ್ ರಾಮರಾಯರು, ಆಲೂರು ವೆಂಕಟರಾಯರು, ಹುಯಿಲಗೋಳ ನಾರಾಯಣ ರಾಯರು, ಡೆಪ್ಯುಟಿ ಚನ್ನಬಸಪ್ಪನವರು, ದೇಶಪಾಂಡೆ ಗಂಗಾಧರರಾಯರು ರಂ. ಶ್ರೀ ಮುಗಳಿಯವರು, ಬೆಟಗೇರಿ ಕೃಷ್ಣ ಶರ್ಮರು, ಮಿರ್ಜಿ ಅಣ್ಣಾರಾಯರು ಮೊದಲಾದ ಮಹಾನ್ ವ್ಯಕ್ತಿಗಳು.

ಕನ್ನಡನಾಡು ಶತಮಾನಗಳಿಂದಲೂ ಸಾಧುಸಂತರ, ಸಮಾಜಸುಧಾರಕರ ನೆಲೆವೀಡು. ಬಸವಣ್ಣ ಮತ್ತಿತರ ಶರಣರು ತಮ್ಮ ವಚನ ಚಳುವಳಿಯ ಮೂಲಕ ಪುರಂದರದಾಸರು, ಕನಕದಾಸರು ತಮ್ಮ ದಾಸಸಾಹಿತ್ಯ ಹಾಗೂ ಶಿಶುನಾಳ ಷರೀಫರು ತಮ್ಮ ತತ್ವ ಪದಗಳ ಮೂಲಕ ಜಗತ್ತಿಗೆ ದಾರಿದೀಪವಾದರು.

ಆಧುನಿಕ ಕನ್ನಡ ಸಾಹಿತ್ಯಕ್ಕೆ ಭಾರತದಲ್ಲಿ ಉತ್ತುಂಗ ಸ್ಥಾನ ದೊರೆತಿದೆ. ಜ್ಞಾನ ಪೀಠ ವಿಜೇತರ ಪೈಕಿ ಆರುಮಂದಿ ಕನ್ನಡಿಗರು. ರಾಷ್ಟ್ರಕವಿ ಕುವೆಂಪು, ವರಕವಿ ದ.ರಾ ಬೇಂದ್ರೆ, ಕಡಲತೀರದ ಭಾರ್ಗವ ಶಿವರಾಮಕಾರಂತ, ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ವಿ.ಕೆ. ಗೋಕಾಕ, ಮತ್ತು ಯು. ಆರ್. ಅನಂತ ಮೂರ್ತಿ ಇವರುಗಳು ನವ ಕನ್ನಡ ಸಾಹಿತ್ಯದ ಸೂತ್ರಧಾರರು. ಸಾಹಿತ್ಯದ ವಿವಿಧ ಕ್ಷೇತ್ರಗಳಲ್ಲಿ ಡಿವಿಜಿ, ಕೈಲಾಸಂ, ಪುತಿನ, ಅನಕೃ, ತರಾಸು, ಆದ್ಯ ರಂಗಾಚಾರ್ಯ, ಗಿರೀಶ್ ಕರ್ನಾಡ, ಅಡಿಗ, ಕಂಬಾರ, ಬಿ.ವಿ. ಕಾರಂತ್ ಬೀಚಿ, ಜಿ ಎಸ್. ಶಿವರುದ್ರಪ್ಪ ಮತ್ತಿತರರು ಅಪ್ರತಿಮ ಸಾಧನೆಗಳಿಸಿದ್ದಾರೆ. ನಾಡಿನ ಪ್ರಥಮ ರಾಷ್ಟ್ರಕವಿ ಮಂಜೇಶ್ವರ ಗೋವಿಂದಪೈ ಅವರು ಚಿರಸ್ಮರಣೀಯರು. ಸಂಗೀತ ಕ್ಷೇತ್ರದಲ್ಲಿ ಬಿಡಾರಂ ಕೃಷ್ಣಪ್ಪ, ವೀಣೆಶೇಷಣ್ಣ, ಟಿ. ಚೌಡಯ್ಯ, ದೊರೆಸ್ವಾಮಿ ಅಯ್ಯಂಗಾರ್, ಭೀಮಸೇನ ಜೋಷಿ, ಗಂಗೂಬಾಯಿ ಹಾನಗಲ್, ಬಸವರಾಜ ರಾಜಗುರು, ಮಲ್ಲಿಕಾರ್ಜುನ ಮನ್ಸೂರ್, ಕುಮಾರ ಗಂಧರ್ವ, ದೇವೇಂದ್ರ ಮುಗುದೇಶ್ವರ ಮುಂತಾದವರು ಕಳಶಪ್ರಾಯರು.

ಜಗದ್ವಿಖ್ಯಾತರಾಗಿ ಮೆರೆದ ಕನ್ನಡ ನಾಡಿನ ದಿಗ್ಗಜಗಳ: ವಿಜ್ಞಾನಿಗಳಾದ ಡಾ. ಸಿ ವಿ. ರಾಮನ್, ಡಾ. ರಾಜಾ ರಾಮಣ್ಣ, ಡಾ. ಯು. ಆರ್. ರಾವ್, ಕೈಗಾರೀಕಣದ ಮುತ್ಸದ್ದಿ ಡಾ. ಎಂ. ವಿಶ್ವೇಶ್ವರಯ್ಯ, ಚಿತ್ರಕಲಾಪಟು ಹೆಬ್ಬಾರ್,

ನಾಟಕಧುರೀಣ, ಗುಬ್ಬಿ ವೀರಣ್ಣ, ಮ್ಯಾಗಸಸೇ ಪ್ರಶಸ್ತಿ ವಿಜೇತರಾದ ಆರ್ ಕೆ. ಲಕ್ಷ್ಮಣ, ಸೀನಾಸಂ. ಸುಬ್ಬಣ್ಣ ಗೈಟಲೈವ್ಲಿಹುಡ್ ಪ್ರಶಸ್ತಿ ವಿಜೇತ ಡಾ. ಹೆಚ್. ಸುದರ್ಶನ್ ಮೊಲಾದವರು. ವರ ನಟ ಡಾ. ರಾಜ್ ಕುಮಾರ್ ಅವರಿಗೆ ಈ ವರ್ಷ ಫಾಲ್ಕೆ ಪ್ರಶಸ್ತಿ ದೊರೆತಿರುವುದು ಕನ್ನಡಿಗರಿಗೆಲ್ಲ ಹೆಮ್ಮೆ. ಮುಖ್ಯ ಮಂತ್ರಿ ಶ್ರೀ ಜೆ. ಹೆಚ್. ಪಟೇಲ್‌ರವರ ನೇತೃತ್ವದಲ್ಲಿ ಆದ್ಯತಾವಲಯಗಳಲ್ಲಿ ಹಲವಾರು ಅಭಿವೃದ್ಧಿ ಯೋಜನೆಗಳನ್ನು ಹಮ್ಮಿಕೊಂಡು ಮುನ್ನಡೆಯುತ್ತಿದೆ.

**ಸರ್ವತೋಮುಖ ಅಭಿವೃದ್ಧಿಗೆ ಯೋಜನೆಗಳು :**

**ಪರಿಕರ ಸಾಧನಗಳ ಅಭಿವೃದ್ಧಿ :**

ವಿದ್ಯುಚ್ಛಕ್ತಿ : ರಾಜ್ಯದಲ್ಲಿ 2000 ಇಸವಿಯ ಒಳಗೆ ಒಟ್ಟಾರೆ 7500 ಮೆ. ವಾ. ವಿದ್ಯುದುತ್ಪಾದನೆಯ ಗುರಿ. ರಾಯಚೂರು 5 ಮತ್ತು 6ನೆಯ ಘಟಕಗಳ ಕಾರ್ಯಾರಂಬಕ್ಕೆ ರೂ. 236 ಕೋಟಿ ಸಾಲದ ಒಡಂಬಡಿಕೆ. ಗ್ರಾಮೀಣ ಕುಡಿಯುವ ನೀರು ಸರಬರಾಜು ಹಾಗೂ ಶೌಚ ವ್ಯವಸ್ಥೆಗೆ ರೂ. 2511.51 ಲಕ್ಷ ನಿರ್ಮಲ ಕರ್ನಾಟಕ ಯೋಜನೆಯಡಿ 5,64,100 ಶೌಚಾಲಯಗಳ ನಿರ್ಮಾಣದ ಗುರಿ. ವಿದ್ಯಾಭ್ಯಾಸ ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚು ಒತ್ತು. '8650 ಪ್ರಾಥಮಿಕ ಶಾಲಾ ಅಧ್ಯಾಪಕರ ನೇಮಕಾತಿ, 1000 ಪ್ರಾಥಮಿಕ ಶಾಲೆಗಳ ಕೊಠಡಿಗಳಿಗಾಗಿ ರೂ. 40 ಕೋಟಿ, 46 ಲಕ್ಷ ಶಾಲಾ ಮಕ್ಕಳಿಗೆ ಉಚಿತ ಪಠ್ಯ ಪುಸ್ತಕ. 48 ಲಕ್ಷ ಶಾಲಾ ಮಕ್ಕಳಿಗೆ ಉಚಿತ ಸಮವಸ್ತ್ರ. "**ನೀರಾವರಿ**" ಕೃಷ್ಣಾ ಮೇಲ್ದಂಡೆ ಯೋಜನೆಗಾಗಿ ಆಗಸ್ಟ್ 96ರ ವರಗೆ ರೂ. 1937 ಕೋಟಿ ವೆಚ್ಚ. ಈ ವರ್ಷ ರೂ. 1000 ಕೋಟಿ ವೆಚ್ಚಕ್ಕೆ ಕ್ರಮ. '**ಪರಿಶಿಷ್ಟ** ಜಾತಿಯುವರ ಕಲ್ಯಾಣ ಕಾರ್ಯಕ್ರಮಗಳಿಗಾಗಿ' ವಿಶೇಷ ಘಟಕ ಯೋಜನೆ ರೂ. 440.71 ಕೋಟಿ ಮೀಸಲು. ಮಹಿಳೆಯರಿಗೆ ಉದ್ಯೋಗಗಳಲ್ಲಿ ಶೇ 30 ರಷ್ಟು ಮೀಸಲಾತಿ. '**ಕೈಗಾರಿಕೆ**' ಆನೇಕಲ್‌ನಲ್ಲಿ ವಾಲ್ವೊ ಸಂಸ್ಥೆಯ ರೂ. 525 ಕೋಟಿ ವೆಚ್ಚದ ವಾಹನ ತಯಾರಿಕೆ ಘಟಕ ನಂಜನಗೂಡಿನಲ್ಲಿ ಟಿವಿಎಸ್-ಸುಜುಕಿಯವರ ದ್ವಿಚಕ್ರ ವಾಹನ ಘಟಕ ಹಾಗೂ ಧಾರವಾಡದಲ್ಲಿ ಟೆಲ್ಕೊರವರ ರೂ. 50 ಕೋಟಿ ವೆಚ್ಚದ ವಾಹನಗಳ ಘಟಕ. ಆರೋಗ್ಯ ಮತ್ತು ಸಂಬಂಧಿತ ಕಾರ್ಯಕ್ರಮಗಳಿಗಾಗಿ ರೂ. 705.98 ಕೋಟಿ. ಪ.ಜಾ.ಪ. ವರ್ಗಗಳ ಶುಶ್ರೂಷೆಗಾಗಿ ಹಳದಿ ಕಾರ್ಡ್ ಯೋಜನೆಯ ರೂ. 250 ಲಕ್ಷ ಮೀಸಲು. ವಿಶ್ವಬ್ಯಾಂಕ್ ನೆರವಿನ ರೂ. 550 ಕೋಟಿ ಆರೋಗ್ಯ ಸೇವೆಗಳ ಅಭಿವೃದ್ಧಿ ಯೋಜನೆ.

ಅಭಿವೃದ್ಧಿ ಪಥದಲ್ಲಿ ಅಗ್ರಸ್ಥಾನ-ಕರ್ನಾಟಕದ ಅವಿರತ ಪ್ರಯತ್ನ

41ನೇ ಕನ್ನಡ ರಾಜ್ಯೋತ್ಸವ ಶುಭಾಶಯಗಳು

ಕರ್ನಾಟಕ ವಾರ್ತೆ.

"ಮಾಟಕೂಟ" ಎಂಬ ಮಾತು ಕೇಳಲಾಗದು, ಶಿವಾ ಶಿವಾ! ನಿಮ್ಮ ಭಕ್ತರಿಗೆ "ಮಾಡಿದೆ" ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯ ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿ ಕೊಂಬವರೂ ನೀವೇ ಕೂಡಲಸಂಗನ ದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು, ಮರ್ಮವನರಿಯದ ಮಾಟ ಸುಯಿದಾನದ ಕೇಡು! ಬಂದ ಸಮಯೋಚಿತವನರಿಯದಿದ್ದರೆ ಸಿಂದಿರಲೊಲ್ಲ ಕೂಡಲಸಂಗಮದೇವಾ.

—ಶ್ರೀ ಬಸವೇಶ್ವರ

# ಆರಾಧ್ಯ ಅಂಡ್ ಆರಾಧ್ಯ ಬಿಲ್ಡರ್ಸ್ ಪ್ರೈ. ಲಿಮಿಟೆಡ್.

21/2, ಆರಾಧ್ಯ ಕಾಂಪ್ಲೆಕ್ಸ್, ವಾಣಿವಿಲಾಸ ರಸ್ತೆ,
ಬೆಂಗಳೂರು-560004.

ದೂರವಾಣಿ :
ಕಛೇರಿ : 623773 ಮನೆ : 262455

" SIDDAGANGA MONTHLY Reg. No. KRNQ - 9

ಶ್ರೀ ಸಿದ್ಧಗಂಗಾ ಬಸವತತ್ವ ಪ್ರಯೋಗ ಶಾಲೆ
ಶ್ರೀ ಶ್ರೀಗಳವರ ವಜ್ರ ಮಹೋತ್ಸವ ಸ್ಮಾರಕ ಸೌಧಗಳು



ನೂತನ ಮಹಾದಾಸೋಹ ಪ್ರಸಾದ ನಿಲಯ



ನೂತನ ಬೃಹತ್ ವಸತಿ ಮಂದಿರ

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ - 572 104.